KA / BG - GPO/ 2515 /WPP-47/ 2006 - 2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಗುರುವಾರ, ಡಿಸೆಂಬರ್ ೧೮, ೨೦೦೮ (ಮಾರ್ಗಶಿರ ೨೭, ಶಕ ವರ್ಷ ೧೯೩೦) | ನಂ. ೧೩೩೫ |
|---|---|---|

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 42 ಎಸ್‌ಆರ್‌ಆರ್ 2008, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್, 2008**

ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಅಧಿನಿಯಮ ಸಂಖ್ಯೆ 14)ರ 3ನೇ ಪ್ರಕರಣದ 2(ಎ) ಉಪ ಪ್ರಕರಣವನ್ನು ಪ್ರಕರಣ 8ರೊಂದಿಗೆ ಓದಿಕೊಂಡು ಅದರಲ್ಲಿ ಅಗತ್ಯಪಡಿಸಲಾದಂತೆ ಕೆಳಕಂಡ ಕರಡು ನಿಯಮಗಳನ್ನು ದಿನಾಂಕ 18.11.2008ರ ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯ ಭಾಗ IV-A ರಲ್ಲಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 42 ಎಸ್‌ಆರ್‌ಆರ್ 2008, ದಿನಾಂಕ 17.11.2008ರಲ್ಲಿ ಪ್ರಕಟಿಸಿ, ಅದರಿಂದ ಭಾದಿತರಾಗಬಹುದಾದಂತಹ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ನಿಯಮಗಳು ಪ್ರಕಟವಾದ ದಿನಾಂಕದಿಂದ 15 ದಿನಗಳ ಒಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ರಾಜ್ಯಪತ್ರವನ್ನು 18ನೇ ನವೆಂಬರ್ 2008ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ,

ಮತ್ತು ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರ ಸ್ವೀಕರಿಸದೆಯಿರುವುದರಿಂದ,

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಂದಿಗೆ ಓದಿಕೊಂಡಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ರಚಿಸುತ್ತದೆ, ಎಂದರೆ :–

**ನಿಯಮಗಳು**

1. **ಶೀರ್ಷಿಕೆ ಮತ್ತು ಪ್ರಾರಂಭ:– (1)** ಈ ನಿಯಮಗಳನ್ನು ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) (68ನೇ ತಿದ್ದುಪಡಿ) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 6ರ ತಿದ್ದುಪಡಿ:–** ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 (ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಿದೆ)ರ ನಿಯಮ 6ರ ಉಪ ನಿಯಮ (1)ರಲ್ಲಿ:–

i) ಖಂಡ (ಎ)ಯಲ್ಲಿ "38 ವರ್ಷಗಳು" ಈ ಪದಗಳ ಬದಲಿಗೆ "40 ವರ್ಷಗಳು" ಈ ಪದಗಳನ್ನು ಪ್ರತಿಷ್ಠಾಪಿಸುವುದು;

ii) ಖಂಡ (ಬಿ)ಯಲ್ಲಿ "36 ವರ್ಷಗಳು" ಈ ಪದಗಳ ಬದಲಿಗೆ "38 ವರ್ಷಗಳು" ಈ ಪದಗಳನ್ನು ಪ್ರತಿಷ್ಠಾಪಿಸುವುದು;

iii) ಖಂಡ (ಸಿ)ಯಲ್ಲಿ "33 ವರ್ಷಗಳು" ಈ ಪದಗಳ ಬದಲಿಗೆ "35 ವರ್ಷಗಳು" ಈ ಪದಗಳನ್ನು ಪ್ರತಿಷ್ಠಾಪಿಸುವುದು.

**3. ಉಳಿಸುವಿಕೆ :–** ನಿಯಮ 2ರಿಂದ ಸದರಿ ನಿಯಮಗಳಿಗೆ ಮಾಡಿದ ತಿದ್ದುಪಡಿಯಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಸೇವೆ ಅಥವಾ ಹುದ್ದೆಗೆ ನೇಮಕಾತಿಯನ್ನು ಈ ನಿಯಮಗಳು ಪ್ರಾರಂಭವಾಗುವ ಮೊದಲು ಪ್ರಕಟಪಡಿಸಿದ್ದರೆ ಅಂತಹ ನೇಮಕಾತಿಗಳನ್ನು ಈ ನಿಯಮಗಳಿಗೆ ತಿದ್ದುಪಡಿ ಮಾಡಿಲ್ಲವೆಂದು ಭಾವಿಸಿ ಮುಂದುವರೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–1)

**Personnel and Administrative Reforms Secretariat**

**NOTIFICATION**

**No. DPAR 42 SRR 2008, Bangalore, Dated : 18th December, 2008**

Whereas, the draft of the following Rules further to amend the Karnataka Civil Services (General Recruitment) Rules, 1977, was published as required by clause (a) of sub-section (2) of section 3 read with section 8 of the Karnataka State Civil Services Act, 1978 (Karnataka Act 14 of 1990), in Notification No. DPAR 42 SRR 2008, dated 17th November 2008 in Part IV-A (No. 1211) of the Karnataka Gazette Extra-ordinary dated 18th November, 2008 inviting objections and suggestions from persons likely to be affected thereby within fifteen days from the date of publication of draft in the Official Gazette.

Whereas, the said Gazette was made available to the public on 18th November 2008,

And, whereas no objection and suggestions have been received by the State Government,

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka makes the following rules namely :-

**RULES**

**1. Title and commencement:-** (1) These rules may be called the Karnataka Civil Services (General Recruitment) (68th Amendment) Rules, 2008.

(2) They shall come into force from the date of their publication in the Official Gazette.

**2. Amendment of Rule 6:-** In the Karnataka Civil Services (General Recruitment) Rules, 1977, (hereinafter referred to as the said rules), in rule 6, in sub-rule (1),-

(i) in clause (a), for the words "thirty-eight years", the words "forty years" shall be substituted;

(ii) in clause (b), for the words "thirty-six years", the words "thirty-eight years" shall be substituted; and

(iii) in clause (c), for the words "thirty-three years", the words "thirty-five years" shall be substituted.

**3. Savings:-** Notwithstanding the amendment to the said rules, by Rule 2, recruitment to any service or post advertised before the commencement of these rules shall be made as if the said rules have not been amended by these rules.

By order and in the name of the Governor of Karnataka,

**DEVARAJU**

Under Secretary to Government

Department of Personnel and Administrative Reforms (Service Rules-1)

# ವಿಶೇಷ ಪತ್ರಿಕೆ

| ಭಾಗ – **IV** | ಬೆಂಗಳೂರು, ಗುರುವಾರ, ಡಿಸೆಂಬರ್ ೧೮, ೨೦೦೮ (ಮಾರ್ಗಶಿರ ೨೭, ಶಕ ವರ್ಷ ೧೯೩೦) | ನಂ. ೧೩೩೬ |
|---|---|---|


**PERSONNEL AND ADMINISTRATIVE REFORMS SECRETARIAT (ELECTIONS)**

**NOTIFICATION**

**No. CIASUE 191 CHUSIA 2008, BANGALORE, DATED : 17th NOVEMBER, 2008**

The accompanying direction No. 576/3/EVM/2008/SDR (LA), dated 10th December, 2008 of the Election Commission of India is published for general information.

By order and in the name of the Governor of Karnataka,

**P.T. KULKARNI**
Assistant Chief Electoral Officer &
Ex – officio Under Secretary to Govt.,
D.P.A.R. (Elections)

**ELECTION COMMISSION OF INDIA**
**Nirvachan Sadan, Ashoka Road, New Delhi – 110 001**

**DIRECTION**

**Dated : 10th December, 2008**

No. 576/3/EVM/2008/SDR (LA):- Whereas, Section 61A of the Representation of the People Act, 1951, provides that the giving and recording of votes by Voting Machines in such manner as may be prescribed, may be adopted in such constituencies as the Election Commission of India may, having regard to the circumstances of each case specify; and

2. Whereas, the Commission has considered the circumstances in 7-Hukkeri, 8-Arbhavi, 56-Devdurga (ST), 77-Karwar, 130-Turuvekere, 138-Madhugiri, 180-Doddaballapur and 187-Maddur Assembly Constituencies in Karnataka, 27-Moirang Assembly Constituency in Manipur and 48-Sujapur, 206-Nandigram and 240-Para Assembly Constituencies in West Bengal and is satisfied that sufficient number of Electronic Voting Machines are available for taking the poll in the above mentioned Assembly Constituencies, the polling personnel are well trained in efficient handling of the Electronic Voting Machines and the electors are also fully conversant with the operation of the Electronic Voting Machines;

3. Now, therefore, the Election Commission of India hereby specifies 7-Hukkeri, 8-Arbhavi, 56-Devdurga (ST), 77-Karwar, 130-Turuvekere, 138-Madhugiri, 180-Doddaballapur and 187-Maddur Assembly Constituencies in Karnataka, 27-Moirang Assembly Constituency in Manipur and 48-Sujapur, 206-Nandigram and 240-Para Assembly Constituencies in West Bengal, as the constituencies in which the votes at the current bye-elections to the Legislative Assemblies of the said States notified on 3rd December, 2008, shall be given and recorded by means of Electronic Voting Machines in the manner prescribed under the Conduct of Elections Rules, 1961, and the supplementary instructions issued by the Commission from time to time on the subject.

By order,

**K.F.WILFRED**
**SECRETARY**


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಡಿಸೆಂಬರ್ ೧೮, ೨೦೦೮ (ಮಾರ್ಗಶಿರ ೨೭, ಶಕ ವರ್ಷ ೧೯೩೦ | ನಂ. ೧೩೩೭ |
|---|---|---|


**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ಪ್ರಕಟಣೆ**

**ಸಂಖ್ಯೆ. ಲೋಇ 49 ಇಎಪಿ 2008, ದಿನಾಂಕ: 18ನೇ ಡಿಸೆಂಬರ್, 2008**

**ವಿಷಯ:–** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2ರ ಅನುಷ್ಠಾನಕ್ಕೆಂದು ಕರ್ನಾಟಕ ಹೆದ್ದಾರಿ ಅಧಿನಿಯಮದ 1964ರ ಅಡಿಯಲ್ಲಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಇವರನ್ನು ಹೆದ್ದಾರಿ ಪ್ರಾಧಿಕಾರಿಯೆಂದು (ಹೈವೇ ಅಥಾರಿಟಿ) ನೇಮಿಸುವ ಬಗ್ಗೆ.

**ಉಲ್ಲೇಖ:–** ಕರ್ನಾಟಕ ರಾಜ್ಯಪತ್ರದ ಪ್ರಕಟಣೆ ಸಂಖ್ಯೆಪಿಡಬ್ಲ್ಯೂಡಿ:49: ಇಎಪಿ:2008, ದಿನಾಂಕ 2ನೇ ಡಿಸೆಂಬರ್, 2008.

ಉಲ್ಲೇಖಿತ ದಿನಾಂಕ 2–12–2008ರ ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿನ ಪ್ರಕಟಣೆಯಲ್ಲಿ 22 ರಾಜ್ಯ ಹೆದ್ದಾರಿಗಳ ಒಟ್ಟು 1441.86 ಕಿಮೀ. ಉದ್ದದ ರಸ್ತೆಗಳಿಗೆ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಇವರನ್ನು ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಪ್ರಕರಣ–4ರಡಿ ತಾತ್ಕಾಲಿಕವಾಗಿ "ಹೆದ್ದಾರಿ ಪ್ರಾಧಿಕಾರಿ" ಎಂದು ಸದರಿ ಕಾಮಗಾರಿಗಳು ಪೂರ್ಣಗೊಂಡು ಸಂಬಂಧಪಟ್ಟ ವಿಭಾಗದ ಕಾರ್ಯಪಾಲಕ ಇಂಜಿನಿಯರುಗಳಿಗೆ ಮರು ಹಸ್ತಾಂತರವಾಗುವವರೆಗೆ ನೇಮಿಸಲಾಗಿರುತ್ತದೆ.

ಈಗ ಸರ್ಕಾರವು ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2ರಡಿ ವಿಶ್ವಬ್ಯಾಂಕ್ ಹಾಗೂ ಏಷಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನಡಿ, ಈ ಪ್ರಕಟಣೆಯೊಂದಿಗಿನ ಅನುಬಂಧದಲ್ಲಿ ಸೂಚಿಸಿರುವ ರಾಜ್ಯ ಹೆದ್ದಾರಿಗಳ ಸರಪಳಿಯ ಭಾಗಗಳಿಗೆ ಸಹ ಅನ್ವಯಿಸುವಂತೆ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಇವರನ್ನು ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಪ್ರಕರಣ–4ರಡಿ ತಾತ್ಕಾಲಿಕವಾಗಿ "ಹೆದ್ದಾರಿ ಪ್ರಾಧಿಕಾರಿ" ಎಂದು ಸದರಿ ಕಾಮಗಾರಿಗಳು ಪೂರ್ಣಗೊಂಡು ಸಂಬಂಧಪಟ್ಟ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಮರು ಹಸ್ತಾಂತರವಾಗುವವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**ಅನುಬಂಧ**

**ಪ್ರಕಟಣೆ ಸಂಖ್ಯೆ. ಲೋಇ 49 ಇಎಪಿ 2008, ದಿನಾಂಕ 17ನೇ ಡಿಸೆಂಬರ್, 2008**

**ವಿಷಯ:–** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2ರ ಅನುಷ್ಠಾನಕ್ಕೆಂದು ಕರ್ನಾಟಕ ಹೆದ್ದಾರಿ ಅಧಿನಿಯಮದ 1964ರ ಅಡಿಯಲ್ಲಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಇವರನ್ನು ಹೆದ್ದಾರಿ ಪ್ರಾಧಿಕಾರಿಯೆಂದು (ಹೈವೇ ಅಥಾರಿಟಿ) ನೇಮಿಸುವ ಬಗ್ಗೆ.

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಯ ಭಾಗದ ವಿವರ |
|---|---|---|
| 1. | 1 | i) ಶಿಕಾರಿಪುರದಿಂದ ಅನವಟ್ಟಿವರೆಗೆ – ಸರಪಳಿ ಕಿಮೀ. 137.00 ರಿಂದ ಕಿಮೀ. 120.00 ಮತ್ತು 170.00 ರಿಂದ 196.00 ಕಿಮೀ.ವರೆಗೆ |
| | | ii) ಅನವಟ್ಟಿಯಿಂದ ಹಾನಗಲ್‌ವರೆಗೆ – ಸರಪಳಿ ಕಿಮೀ. 196.00 ರಿಂದ ಕಿಮೀ. 221.00 ವರೆಗೆ |
| 2. | 1 ಮತ್ತು 69 | ಹಾನಗಲ್‌ದಿಂದ ತಡಸವರೆಗೆ – ಸರಪಳಿ ಕಿಮೀ. 221.00 ರಿಂದ ಕಿಮೀ. 265.00 ವರೆಗೆ |
| 3. | 57 | ಶಿವಮೊಗ್ಗದಿಂದ ಶಿಕಾರಿಪುರದವರೆಗೆ – ಸರಪಳಿ ಕಿಮೀ. 0.00 ರಿಂದ ಕಿಮೀ. 50.00 ವರೆಗೆ |
| **ರಸ್ತೆಗಳ ಒಟ್ಟು ಉದ್ದ – 170.80 ಕಿಮೀ.** | | |

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಡಿಸೆಂಬರ್ ೧೮, ೨೦೦೮ (ಮಾರ್ಗಶಿರ ೨೭, ಶಕ ವರ್ಷ ೧೯೩೦) | ನಂ. ೧೩೩೮ |
|---|---|---|

**PUBLIC WORKS, PORTS & INLAND WATER TRANSPORT SECRETARIAT**

**NOTIFICATION**

**No. PWD 40 CRM 2008, Dated : 18th December, 2008**

**Sub:-** Toll tax collection from completed section of Peripheral & link Road of B.M.I.C.P.

WHEREAS the Government of Karnataka has entered into an agreement with M/s Nandi Infrastructure Corridor Enterprises Limited (hereinafter referred to as the Company') to develop the Toll Road which means the Expressway between Bangalore & Mysore, the Bangalore Feeder, the Mysore Feeder, the Link Road and Outer Peripheral Road collectively.

AND WHEREAS having regard to the expenditure involved in building, maintenance, management and operation, on the capital invested and reasonable return, the Government of Karnataka has decided to determine the Toll rates.

NOW THEREFORE in exercise of the powers conferred under Section 19A (3) of the Karnataka Highways Act 1964 (hereinafter referred to as the said 'Act'), the Government of Karnataka hereby authorise the Company to demand, collect and retain the Toll for different type of vehicles at the rates specified in the Schedules below:

**1.1 SCHEDULE OF TOLL**

| Sl. No. | From | To | Substantial length completed in KMS | Car Rs. | Bus Rs. | Truck Rs. | LCV Rs. | MAV Rs. | 2W Rs. |
|---|---|---|---|---|---|---|---|---|---|
| 1. | Hosur Road | Bannerghatta Road | 7.944 | 21 | 56 | 36 | 22 | 39 | 8 |
| 2. | Bannerghatta Road | Kanakapura Road | 6.791 | 18 | 48 | 31 | 18 | 33 | 7 |
| 3. | Kanakapura Road | Mysore Road | 8.245 | 21 | 58 | 37 | 22 | 41 | 9 |
| 4. | Mysore Road | Magadi Road | 9.545 | 25 | 67 | 43 | 26 | 47 | 10 |
| 5. | Magadi Road | Tumkur Road | 7.475 | 19 | 52 | 34 | 20 | 37 | 8 |
| 6. | Mysore Road | Tumkur Road | 17.02 | 44 | 119 | 77 | 46 | 84 | 18 |

**1.2 DISPLAY OF TOLL RATES:**

1.2.1. The approved Toll rates should be displayed in English, Hindi and Kannada on boards in the vicinity of Toll Plazas which should be readable from driver's seat.

The above mentioned rate/s be displayed on Boards erected in the vicinity of the Toll Road.

**Dr. Ravneet Singh**
Project Co-ordinator
Bangalore-Mysore Infrastructure Corridor Project
Public Works, Ports & Inland Water Transport Department

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ,. ಡಿಸೆಂಬರ್ ೧೯, ೨೦೦೮ (ಮಾರ್ಗಶಿರ ೨೮, ಶಕ ವರ್ಷ ೧೯೩೦) | ನಂ. ೧೩೩೯ |
|---|---|---|

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ನಂ : ಕಾಇ : 87 : ಎಲ್ಎಂಡಬ್ಲ್ಯೂ : 2008, ಬೆಂಗಳೂರು, ದಿನಾಂಕ : 3ನೇ ನವೆಂಬರ್, 2008**

ಕರ್ನಾಟಕ ರಾಜ್ಯಾದ್ಯಂತ "**ಆಹಾರ ಸಂಸ್ಕರಣೆ, ಆಹಾರ ಪದಾರ್ಥಗಳ ಪ್ಯಾಕ್ ಮಾಡುವ, ಕಾಫಿ ಮತ್ತು ಸಾಂಬಾರ್ ಪದಾರ್ಥಗಳನ್ನು ಪ್ಯಾಕ್ ಮಾಡುವುದು ಒಳಗೊಂಡಂತೆ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಟ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂಖ್ಯೆ: (XI) 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ / ಆಕ್ಷೇಪಣೆಗಳೇನಾದರು ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಇಲ್ಲವೇ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಟ ವೇತನ ಕಾಯ್ದೆ 1948ರ ಅಧಿನಿಯಮ 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ "**ಆಹಾರ ಸಂಸ್ಕರಣೆ, ಆಹಾರ ಪದಾರ್ಥಗಳ ಪ್ಯಾಕ್ ಮಾಡುವ, ಕಾಫಿ ಮತ್ತು ಸಾಂಬಾರ್ ಪದಾರ್ಥಗಳನ್ನು ಪ್ಯಾಕ್ ಮಾಡುವುದು ಒಳಗೊಂಡಂತೆ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಟ ವೇತನ ಪ್ರತಿ ತಿಂಗಳಿಗೆ | | |
|---|---|---|---|---|
| | | ವಲಯ-1 | ವಲಯ-2 | ವಲಯ-3 |
| 1 | 2 | 3 | 4 | 5 |
| | [ಅ] ಅತಿ ಕುಶಲ ಕಾರ್ಮಿಕರು | | | |
| 1 | ಫೋರ್‌ಮನ್ | 3427-50 | 3361-50 | 3328-81 |
| 2 | ಮ್ಯಾನೇಜರ್ | | | |
| 3 | ಸೂಪರ್‌ವೈಸರ್ | 3286-81 | 3220-00 | 3186-50 |
| | [ಆ] ಕುಶಲ ಕಾರ್ಮಿಕರು | | | |
| 1 | ಮೆಷಿನ್ ಆಪರೇಟರ್ | 3262-66 | 3196-51 | 3162-91 |
| 2 | ಸೀಮರ್ ಆಪರೇಟರ್ | | | |
| 3 | ಬಾಯ್ಲರ್ ಆಪರೇಟರ್ | | | |
| 4 | ಜನರೇಟರ್ ಆಪರೇಟರ್ | | | |
| 5 | ಮಿಕ್ಸ್ ರೂಂ ಆಪರೇಟರ್ | | | |
| 6 | ಫ್ರಿಜರ್ ಆಪರೇಟರ್ | | | |
| 7 | ಪ್ರೋಸೆಸಿಂಗ್ ಆಪರೇಟರ್ | | | |
| 8 | ಸೀನಿಯರ್ ಆಪರೇಟರ್ | | | |
| 9 | ಆಪರೇಟರ್ | 3262-00 | 3196-00 | 3162-91 |
| 10 | ಮೆಕ್ಯಾನಿಕ್ | | | |
| 11 | ಟೆಕ್ನೀಷಿಯನ್ | | | |
| 12 | ಲ್ಯಾಬ್ ಟೆಕ್ನೀಷಿಯನ್ | | | |
| 13 | ಎಲೆಕ್ಟ್ರಿ ಷಿಯನ್ | | | |
| 14 | ಕೆಮಿಸ್ಟ್ | | | |
| 15 | ಕಟ್ಟರ್ / ಮಿಕ್ಸರ್ | | | |
| 16 | ಸ್ವೀಟ್ ಮೇಕರ್ | | | |
| 17 | ಕೋವ ಮೇಕರ್ | | | |

| 1 | 2 | 3 | 4 | 5 |
|---|---|---|---|---|
| 18 | ಪರ್ಚೇಸರ್ | 3262-00 | 3196-00 | 3162-91 |
| 19 | ಸ್ಟೋರ್ ಕೀಪರ್ ಇತರೆ ಕುಶಲ ಕೆಲಸಕ್ಕೆ | | | |
| 20 | ಡ್ರೈವರ್ | 3050-00 | 2988-00 | 2956-06 |
| | [ಇ] **ಅರೆ ಕುಶಲ ಕಾರ್ಮಿಕರು** | | | |
| 1 | ಪ್ರೊಡಕ್ಷನ್ ಅಸಿಸ್ಟೆಂಟ್ | 3096-00 | 3030-61 | 2998-00 |
| 2 | ಸೇಲ್ಸ್‌ಮನ್ | | | |
| 3 | ಸಾರ್ಟರ್ / ಇತರೆ ಅರೆ ಕುಶಲ ಕೆಲಸಕ್ಕೆ | | | |
| | [ಈ] **ಕುಶಲರಲ್ಲದವರು** | | | |
| 1 | ಬಾಟರ್ ತುಂಬುವವ | 2851-00 | 2841-61 | 2835-26 |
| 2 | ಪ್ಯಾಕ್ ಮಾಡುವವ | | | |
| 3 | ಕೋಲ್ಡ್ ರೂಂ ಬಾಯ್ | | | |
| 4 | ಕ್ಲೀನಿಂಗ್ ಅಂಡ್ ಮಿಕ್ಸಿಂಗ್ | | | |
| 5 | ಪೌಡಲಿಂಗ್ ಅಂಡ್ ಮಿಕ್ಸಿಂಗ್ | | | |
| 6 | ಪ್ಯಾಕರ್ಸ್ | | | |
| 7 | ಸಹಾಯಕರು | | | |
| 8 | ಮಜ್ದೂರ್ | | | |
| 9 | ಜನರಲ್ ವರ್ಕರ್ಸ್ | | | |
| 10 | ಹೆಲ್ಪರ್ಸ್ | | | |
| 11 | ಕ್ಲೀನರ್ಸ್ | | | |
| 12 | ಲೋಡಿಂಗ್ ಮತ್ತು ಅನ್‌ಲೋಡಿಂಗ್ ಮಾಡುವವ | | | |
| 13 | ಪ್ಯೂನ್ | | | |
| 14 | ವಾಚ್‌ಮನ್ | | | |
| 15 | ಪೀಲರ್ | 2851-00 | 2841-61 | 2835-26 |
| 16 | ಸ್ವೀಪರ್ / ಸ್ಕಾವೆಂಜರ್ / ಮೇಲೆ ಕಾಣಿಸದೆ ಇರುವ ಕುಶಲರಲ್ಲದ ಇತರೆ ಕಾರ್ಮಿಕರು | | | |
| | [ಉ] **ಕಛೇರಿ ಸಿಬ್ಬಂದಿ** | | | |
| 1 | ಅಕೌಂಟೆಂಟ್ / ಕ್ಯಾಷಿಯರ್ | 3130-20 | 3096-75 | 3079-96 |
| 2 | ಕ್ಯಾಷಿಯರ್ | | | |
| 3 | ಶೀಘ್ರಲಿಪಿಗಾರ | | | |
| 4 | ಗುಮಾಸ್ತ | | | |
| 5 | ಬೆರಳಚ್ಚುಗಾರ | | | |
| 6 | ಕಲೆಕ್ಷನ್ ಕ್ಲರ್ಕ್ | 2956-00 | 2900-00 | 2873-00 |
| 7 | ಬುಕ್ಕಿಂಗ್ / ಡೆಲಿವರ್ ಕ್ಲರ್ಕ್ | | | |
| 8 | ಸೇಲ್ಸ್ ಅಸಿಸ್ಟೆಂಟ್ / ಬಿಲ್ ಕ್ಲರ್ಕ್ | | | |
| 9 | ಆಫೀಸ್ ಬಾಯ್ / ಕಛೇರಿ ಸಹಾಯಕ | 2851-00 | 2841-00 | 2834-25 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3196 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವಲಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.

2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
   (ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
   (ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
   (ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

**9. ಅತಿ ಕುಶಲ** : ಅತಿ ಕುಶಲ ಕೆಲಸಗಾರರು ಎಂದರೆ ಯಾರು ಹೆಚ್ಚಿನ ನೈಪುಣ್ಯತೆಯ ಕೆಲಸವನ್ನು ನಿಖರವಾಗಿ ಮಾಡಬಲ್ಲವರಾಗಿದ್ದು, ನಕ್ಷೆಯನ್ನು ಓದಬಲ್ಲ ಮತ್ತು ಅದರ ಆಧಾರದ ಮೇಲೆ ಕೆಲಸ ಮಾಡಬಲ್ಲವರಾಗಿದ್ದು, ಅವರ ವಿಭಾಗದ ಕುಶಲ ಮತ್ತು ಇತರೇ ಕೆಲಸಗಾರರ ಕೆಲಸವನ್ನು ನಿರ್ದೇಶಿಸಬಲ್ಲ ಸಾಮರ್ಥ್ಯವುಳ್ಳವರಾಗಿದ್ದು, ಆ ವಿಭಾಗದ ಕೆಲಸವನ್ನು ಸ್ವತಂತ್ರವಾಗಿ ನಿರ್ವಹಿಸಿಕೊಂಡು ಹೋಗಬಲ್ಲವರಾಗಿರಬೇಕು.

**10. ಕುಶಲ** : ಕುಶಲ ಕೆಲಸಗಾರರು ಅಂದರೆ ಸ್ವತಂತ್ರವಾಗಿ, ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ, ಅವಶ್ಯವಿದ್ದರೆ ಸರಳವಾದ ನಕ್ಷೆಗಳನ್ನು ಓದಿ ಮತ್ತು ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.

**11. ಅರೆ ಕುಶಲ** : ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರ ಉಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.

**12. ಕುಶಲರಲ್ಲದವರು** : ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನುಗಳ ಜ್ಞಾನವಿರುವ ಕೆಲಸವನ್ನು ಮಾಡುವವರು.

ಯಾವುದೇ ಯಂತ್ರಗಳನ್ನು ನಡೆಸಲು ನೇಮಿಸಿರುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಾರದು. ಕಾವಲುಗಾರ, ಸಿಪಾಯಿ, ಚೌಕೀದಾರ, ಕಸ ಗುಡಿಸುವವರು, ಜಾಡಮಾಲಿ ಹಾಗೂ ಅದೇ ತರಹದ ಕೆಲಸ ಮಾಡುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸುವುದು.

ವಲಯ-1 : ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳು ಮತ್ತು ಗೊತ್ತುಪಡಿಸಿದ ಜಿಲ್ಲಾ ಕೇಂದ್ರ
ಮತ್ತು ಆಗ್ಲೋಮರೇಷನ್ ಪ್ರದೇಶಗಳು. [ಕಾರ್ಪೋರೇಷನ್ ಇರುವ ಪಟ್ಟಣಗಳು]

ವಲಯ-2 : ಜಿಲ್ಲಾ ಕೇಂದ್ರ ಪ್ರದೇಶಗಳು ಮತ್ತು ಅದಕ್ಕೆ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.

ವಲಯ-3 : ವಲಯ-1 ಮತ್ತು 2 ರಲ್ಲಿ ನಮೂದಿಸದೇ ಇರುವ ರಾಜ್ಯದ ಇತರೇ ಪ್ರದೇಶಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ,. ಡಿಸೆಂಬರ್ ೧೯, ೨೦೦೮ (ಮಾರ್ಗಶಿರ ೨೮, ಶಕ ವರ್ಷ ೧೯೩೦) | ನಂ. ೧೩೪೦ |
|---|---|---|

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ನಂ : ಕಾಇ : 90 : ಎಲ್ಎಂಡಬ್ಲ್ಯೂ : 2008, ಬೆಂಗಳೂರು, ದಿನಾಂಕ : 3ನೇ ನವೆಂಬರ್, 2008**

ಕರ್ನಾಟಕ ರಾಜ್ಯಾದ್ಯಂತ "**ಹೋಟೆಲ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಟ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂಖ್ಯೆ

(XI) 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1) ನೇ ಉಪ ಪ್ರಕರಣದ (ಬಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಬಾಧಿತರಾಗುವ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ / ಆಕ್ಷೇಪಣೆಗಳೇನಾದರು ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಇಲ್ಲವೇ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ 1948ರ ಅಧಿನಿಯಮ 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ "**ಹೋಟೆಲ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ | | |
|---|---|---|---|---|
| | | ವಲಯ-1 | ವಲಯ-2 | ವಲಯ-3 |
| 1 | 2 | 3 | 4 | 5 |
| 1 | ಅಡಿಗೆಯವರು/ಸಿಹಿತಿಂಡಿ ಮಾಡುವವರು/ ಲೆಕ್ಕಗಾರ [ಅಕೌಂಟೆಂಟ್]/ ಸ್ವಾಗತಕಾರರು / ದೂರವಾಣಿ ನಿರ್ವಾಹಕ | 3452-92 | 3420-37 | 3393-01 |
| 2 | ಮೇಲ್ವಿಚಾರಕರು / ಅಡಿಗೆ ಮನೆ ಮೇಲ್ವಿಚಾರಕರು | 3420-37 | 3405-25 | 3379-95 |
| 3 | ಬಾರ್‌ಮನ್ | 3394-86 | 3381-00 | 3369-45 |
| 4 | ಸಹಾಯಕ ಅಡಿಗೆಯವ / ದೋಸೆ ಮಾಡುವವ / ಇಡ್ಲಿ ಮಾಡುವವ / ಚಪಾತಿ ಮಾಡುವವ | 3381-00 | 3369-45 | 3348-66 |
| 5 | ಕೊಠಡಿ ಹುಡುಗ / ಸಹಾಯಕ [ರೂಂಬಾಯ್] | 3381-00 | 3369-00 | 3348-66 |
| 6 | ಕಾಫಿ/ಟೀ ಮಾಡುವವ/ವಿತರಣೆ ಸರಬರಾಜು ಮಾಡುವವ ಬೇರರ್/ ವೈಟರ್, ಬಟ್ಲರ್, ಅರೆಯುವವ ಅಥವಾ ರುಬ್ಬುವವ | 3348-66 | 3166-80 | 3140-23 |
| 7 | ತರಕಾರಿ ಹಚ್ಚುವವ / ಮಾಂಸದ ಚೂರು ಮಾಡುವವ / ಪಾರ್ಸಲ್ ಹುಡುಗ | 3166-80 | 3129-73 | 3050-25 |
| 8 | ನೀರು ಕೊಂಡ್ಯೊಯುವವ / ತೋಟದ ಮಾಲಿ / ದೋಬಿ ಅಥವಾ ಅಗಸ | | | |
| 9 | ವಿದ್ಯುತ್ ವಿಷಯಗ್ರಾಹಿ [ಎಲೆಕ್ಟ್ರೀಷಿಯನ್] | 3420-37 | 3393-81 | 3379-95 |
| 10 | ಲಿಫ್ಟ್ ಅಟೆಂಡರ್ | 3166-08 | 3139-18 | 3050-45 |
| 11 | ಗುಮಾಸ್ತ / ಬೆರಳಚ್ಚುಗಾರ / ನಗದು ಗುಮಾಸ್ತ / ಸರಕು ಗುಮಾಸ್ತ | 3381-00 | 3368-45 | 3348-46 |
| 12 | ಶುಚಿ ಮಾಡುವವರು/ಜವಾನ/ಕಾವಲುಗಾರ / ಕಸಗುಡಿಸುವವರು/ ಕಛೇರಿ ಸಹಾಯಕ ಮತ್ತು ಮೇಲ್ಕಂಡ ಕೆಲಸಗಳಿಗೆ ಹೋಲುವ ರೀತಿಯ ಇನ್ನಾವುದೇ ರೀತಿಯ ಕೆಲಸ ಮಾಡುವವರು. | 3166-80 | 3140-23 | 3050-45 |
| 13 | ಮೇಲ್ಕಂಡ ವರ್ಗಗಳ ಹೊರತುಪಡಿಸಿ ಇನ್ಯಾವುದೇ ರೀತಿಯ ಪರಿಶ್ರಮವಿಲ್ಲದ ಕೆಲಸ ಮಾಡುವವರು. | 3166-80 | 3140-23 | 3050-46 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3196 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು.

ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
   (ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
   (ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
   (ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷ ದೊಳಗಿರುವ ವ್ಯಕ್ತಿ.

ವಲಯ-1 : ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳು ಮತ್ತು ಗೊತ್ತುಪಡಿಸಿದ ಜಿಲ್ಲಾ ಕೇಂದ್ರ ಮತ್ತು ಆಗ್ಲೋಮರೇಷನ್ ಪ್ರದೇಶಗಳು. [ಕಾರ್ಪೊರೇಷನ್ ಇರುವ ಪಟ್ಟಣಗಳು]
ವಲಯ-2 : ಜಿಲ್ಲಾ ಕೇಂದ್ರ ಪ್ರದೇಶಗಳು ಮತ್ತು ಅದಕ್ಕೆ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.
ವಲಯ-3 : ವಲಯ-1 ಮತ್ತು 2 ರಲ್ಲಿ ನಮೂದಿಸದೇ ಇರುವ ರಾಜ್ಯದ ಇತರೇ ಪ್ರದೇಶಗಳು.

**ಸೂಚನೆ**:- ಕಾರ್ಮಿಕರಿಗೆ ಆಹಾರ ಸರಬರಾಜು ಮಾಡಲಾಗುತ್ತಿದ್ದರೆ ಅಂತಹವರ ಸಂಬಳದಿಂದ ಈ ಅಧಿಸೂಚನೆಯ ಅನುಸೂಚಿಯಲ್ಲಿನ ಆಯಾ ವಲಯಗಳಲ್ಲಿನ ಕನಿಷ್ಠ ವೇತನಗಳಲ್ಲಿ ಯಾವುದು ಅತ್ಯಂತ ಕಡಿಮೆಯೋ ಅದರ ಮೇಲೆ ಶೇ. 15 ರಷ್ಟು ಕಡಿತ ಮಾಡಬಹುದಾಗಿದೆ.

ಗ್ರಾಹಕ ಬೆಲೆ ಸೂಚ್ಯಂಕದಲ್ಲಿ 3196 ಅಂಶಗಳ ಮೇಲೆ ಆಗುವ ಏರಿಕೆ ಇಳಿತಕ್ಕೆ ಅನುಗುಣವಾಗಿ ಜೀವನ ನಿರ್ವಹಣಾ ಭತ್ಯೆಯಲ್ಲಿಯೂ ಆಹಾರ ಸರಬರಾಜಿಗಾಗಿ ಮೇಲ್ಕಂಡ ಸೂತ್ರದಂತೆ ಶೇ. 15 ರಷ್ಟು ಕಡಿತ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ,. ಡಿಸೆಂಬರ್ ೧೯, ೨೦೦೮ (ಮಾರ್ಗಶಿರ ೨೮, ಶಕ ವರ್ಷ ೧೯೩೦) | ನಂ. ೧೩೪೧ |
|---|---|---|

## ಕಾರ್ಮಿಕ ಸಚಿವಾಲಯ
## ಅಧಿಸೂಚನೆ

**ನಂ : ಕಾಇ : 92 : ಎಲ್‌ಎಂಡಬ್ಲ್ಯೂ : 2008, ಬೆಂಗಳೂರು, ದಿನಾಂಕ : 31ನೇ ಅಕ್ಟೋಬರ್, 2008**

ಕರ್ನಾಟಕ ರಾಜ್ಯಾದ್ಯಂತ "**ಪ್ಲಾಸ್ಟಿಕ್, ಪಾಲಿ ಪ್ಲಾಸ್ಟಿಕ್, ರಬ್ಬರ್ ಮತ್ತು ಪಿವಿಸಿ ಪೈಪ್ಸ್ ಮ್ಯಾನುಫಾಕ್ಚರಿಂಗ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಟ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂಖ್ಯೆ (XI) 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1) ನೇ ಉಪ ಪ್ರಕರಣದ (ಬಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಬಾಧಿತರಾಗುವ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ / ಆಕ್ಷೇಪಣೆಗಳೇನಾದರು ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಇಲ್ಲವೇ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಟ ವೇತನ ಕಾಯ್ದೆ 1948ರ ಅಧಿನಿಯಮ 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ "**ಪ್ಲಾಸ್ಟಿಕ್, ಪಾಲಿ ಪ್ಲಾಸ್ಟಿಕ್, ರಬ್ಬರ್ ಮತ್ತು ಪಿವಿಸಿ ಪೈಪ್ಸ್ ಮ್ಯಾನುಫಾಕ್ಚರಿಂಗ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರಮ ಸಂಖ್ಯೆ | ಕೆಲಸದ ವರ್ಗಗಳು | ಕನಿಷ್ಟ ವೇತನ ದರಗಳು ಪ್ರತಿ ತಿಂಗಳಿಗೆ | |
|---|---|---|---|
| | | ವಲಯ-1 | ವಲಯ-2 |
| 1 | 2 | 3 | 4 |
| 1 | ಮ್ಯಾನೇಜರ್ | | |
| 2 | ಸೂಪರ್‌ವೈಸರ್ | | |
| 3 | ಮೆಷಿನ್ ಆಪರೇಟರ್ | 3607-01 | 3540-86 |

| | | | |
|---|---|---|---|
| 4 | ಆಪರೇಟರ್ | | |
| 5 | ಫಿಟ್ಟರ್ ಮೆಷಿನಿಸ್ಟ್ | | |
| 6 | ಮೆಷಿನ್ ಡ್ರೈವರ್ | | |
| 7 | ಫಿಟ್ಟರ್ | | |
| 8 | ಎಲೆಕ್ಟ್ರಿಷಿಯನ್ | | |
| 9 | ಬಾಯ್ಲರ್ ಆಪರೇಟರ್ | | |
| 10 | ಮೌಲ್ಡರ್ ಕಾಂಪೌಂಡ್ ಕವರಿಂಗ್ | | |
| 11 | ವೀವರ್ ಮತ್ತು ಬೈಂಡರ್ | 3582-86 | 3516-71 |
| 12 | ಪೋಲ್ಡರ್ಸ್ | | |
| 13 | ಮಿಕ್ಸರ್ | | |
| 14 | ಗೋಡೌನ್ ಕೀಪರ್ | | |
| 15 | ಪ್ಯಾಕರ್ಸ್ [ಪ್ಯಾಕ್ ಮಾಡುವವ] | | |
| 16 | ಪೈಪ್ ತಯಾರಕರು | | |
| 17 | ಪ್ಲಾಸ್ಟಿಕ್ ಕ್ಯಾಲಿಯರ್ಸ್ | | |
| 18 | ಕ್ಲೀನರ್ | | |
| 19 | ಮಜ್ದೂರ್ | 3171-26 | 3161-81 |
| 20 | ವಾಚ್‌ಮೆನ್ | | |
| 21 | ಅಟೆಂಡರ್ | | |
| 22 | ಸ್ವೀಪರ್ | | |
| 23 | ಅಕೌಂಟೆಂಟ್ | 3450-56 | 3416-96 |
| 24 | ಡ್ರೈವರ್ | | |
| 25 | ಗುಮಾಸ್ತ | 3370-76 | 3309-86 |
| 26 | ಬೆರಳಚ್ಚುಗಾರ | 3276-26 | 3221-76 |
| 27 | ಆಫೀಸ್ ಬಾಯ್ | | |
| 28 | ಸಹಾಯಕ | 3171-26 | 3161-81 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3196 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ ೮೦ ಪ್ರತಿಶತ ವೇತನವನ್ನು ಕೊಡತಕ್ಕದ್ದು.
(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

ವಲಯ-1 : ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳು ಮತ್ತು ಗೊತ್ತುಪಡಿಸಿದ ಜಿಲ್ಲಾ ಕೇಂದ್ರ ಮತ್ತು ಆಗ್ಲೋಮರೇಷನ್ ಪ್ರದೇಶಗಳು. [ಕಾರ್ಪೊರೇಷನ್ ಇರುವ ಪಟ್ಟಣಗಳು]
ವಲಯ-2 : ವಲಯ-1 ರಲ್ಲಿ ನಮೂದಿಸದೇ ಇರುವ ರಾಜ್ಯದ ಇತರೆ ಪ್ರದೇಶಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ,. ಡಿಸೆಂಬರ್ ೧೯, ೨೦೦೮ (ಮಾರ್ಗಶಿರ ೨೮, ಶಕ ವರ್ಷ ೧೯೩೦) | ನಂ. ೧೩೪೨ |
|---|---|---|

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ನಂ : ಕಾಇ : 94 : ಎಲ್‌ಎಂಡಬ್ಲ್ಯೂ : 2008, ಬೆಂಗಳೂರು, ದಿನಾಂಕ : 3ನೇ ನವೆಂಬರ್, 2008**

ಕರ್ನಾಟಕ ರಾಜ್ಯಾದ್ಯಂತ "**ವೃತ್ತಿಪರ ಔಷಧ, ಗ್ರಾಹಕ ವಸ್ತುಗಳ ಮತ್ತು ಸೇವೆಗಳ ಮಾರಾಟ ಪ್ರತಿನಿಧಿ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂಖ್ಯೆ (XI) 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ / ಆಕ್ಷೇಪಣೆಗಳೇನಾದರು ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಇಲ್ಲವೇ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ 1948ರ ಅಧಿನಿಯಮ 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ "**ವೃತ್ತಿಪರ ಔಷಧ, ಗ್ರಾಹಕ ವಸ್ತುಗಳ ಮತ್ತು ಸೇವೆಗಳ ಮಾರಾಟ ಪ್ರತಿನಿಧಿ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ.ಸಂ. | ಕೆಲಸದ ವರ್ಗಗಳು | ಕನಿಷ್ಟ ವೇತನ |
|---|---|---|
| 1 | 2 | 3 |
| 1 | ಏರಿಯಾ ಸೇಲ್ಸ್ ಮ್ಯಾನೇಜರ್ / ಆಫೀಸರ್ | 4080-40 |
| 2 | ಸೇಲ್ಸ್ ಆಫೀಸರ್ | |
| 3 | ಸೇಲ್ಸ್ ಆಫೀಸ್ ಮಾರ್ಕೆಟಿಂಗ್ ಎಕ್ಸಿಕ್ಯೂಟಿವ್ | |
| 4 | ಸೇಲ್ಸ್ ಎಕ್ಸಿಕ್ಯೂಟಿವ್ | |
| 5 | ಮೆಡಿಕಲ್ ಸೇಲ್ಸ್ ರೆಪ್ರಸೆಂಟೇಟಿವ್ಸ್ | 3557-50 |
| 6 | ಸೇಲ್ಸ್ ರೆಪ್ರಸೆಂಟೇಟಿವ್ಸ್ | |
| 7 | ಟೆಕ್ನಿಕಲ್ ರೆಪ್ರಸೆಂಟೇಟಿವ್ಸ್ | |
| 8 | ಡ್ರೈವರ್ | 3165-85 |
| 9 | ಮಜ್ದೂರ್ | 3092-35 |
| 10 | ವಾಚ್‌ಮೆನ್ | |
| 11 | ಸೇಲ್ಸ್ ಬಾಯ್ಸ್ | |
| | **ಕಛೇರಿ ಸಿಬ್ಬಂದಿ** | |
| 12 | ಅಕೌಂಟೆಂಟ್ | 3417-85 |
| 13 | ಗುಮಾಸ್ತ/ಬೆರಳಚ್ಚುಗಾರ | 3235-15 |
| 14 | ಆಫೀಸ್ ಬಾಯ್ | 3092-35 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3196 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ,. ಡಿಸೆಂಬರ್ ೧೯, ೨೦೦೮ (ಮಾರ್ಗಶಿರ ೨೮, ಶಕ ವರ್ಷ ೧೯೩೦) | ನಂ. ೧೩೪೩ |
|---|---|---|

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ನಂ : ಕಾಇ : 95 : ಎಲ್ಎಂಡಬ್ಲ್ಯೂ : 2008, ಬೆಂಗಳೂರು, ದಿನಾಂಕ : 3ನೇ ನವೆಂಬರ್, 2008**

ಕರ್ನಾಟಕ ರಾಜ್ಯಾದ್ಯಂತ "**ರಸ್ತೆಗಳ ನಿರ್ಮಾಣ ಅಥವಾ ನಿರ್ವಹಣಾ ಮತ್ತು ಕಟ್ಟಡಗಳ ನಿರ್ಮಾಣಗಳಲ್ಲಿನ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಟ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂಖ್ಯೆ (XI) 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1) ನೇ ಉಪ ಪ್ರಕರಣದ (ಬಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ /

ಆಕ್ಷೇಪಣೆಗಳೇನಾದರು ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಇಲ್ಲವೇ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ 1948ರ ಅಧಿನಿಯಮ 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ "ರಸ್ತೆಗಳ ನಿರ್ಮಾಣ ಅಥವಾ ನಿರ್ವಹಣಾ ಮತ್ತು ಕಟ್ಟಡಗಳ ನಿರ್ಮಾಣಗಳಲ್ಲಿನ" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು ರೂ.ಗಳಲ್ಲಿ [ಪ್ರತಿ ದಿನಕ್ಕೆ] | |
|---|---|---|---|
| | | ವಲಯ-1 | ವಲಯ-2 |
| 1 | 2 | 3 | 4 |
| | **ಕುಶಲ-ಎ** | | |
| 1 | ರೋಡ್ ರೋಲರ್ ಚಾಲಕ, ಕಮ್ಮಾರ | 115-00 | 112-00 |
| 2 | ಕಲ್ಲು ಕಡಿಯುವವ | | |
| 3 | ಒಂದನೇ ದರ್ಜೆಯ ಗಾರೆ, ಇಟ್ಟಿಗೆ ಕೆಲಸದವ | | |
| 4 | ಒಂದನೇ ದರ್ಜೆ ಬಡಗಿ | | |
| 5 | ಕೊಳಾಯಿಯವ [ಪ್ಲಂಬರ್] | | |
| 6 | ತವರದ ಕೆಲಸದವ | | |
| 7 | ಮುಖ್ಯ ಕೆಲಸಗಾರ [ಫೋರ್‌ಮನ್] | | |
| 8 | ನರಂಗ | | |
| 9 | ಬಣ್ಣ ಬಳಿಯುವವ [ಪೇಂಟರ್] | | |
| 10 | 1ನೇ ದರ್ಜೆ ಫಿಟ್ಟರ್ | | |
| 11 | 1ನೇ ದರ್ಜೆ ಮೆಕ್ಯಾನಿಕ್ | | |
| 12 | ಆಸ್ಪತ್ರೆ ವಾಹನ ಅಥವಾ ಬಸ್ ಚಾಲಕ | 115-00 | 112-00 |
| 13 | ವಾಯು ಬೈರಿಗೆ ಯಂತ್ರ ಚಾಲಕ | | |
| 14 | ಯಂತ್ರ ಚಾಲಕ | | |
| 15 | ಗ್ಯಾಸ್‌ನಿಂದ ಅಥವಾ ವಿದ್ಯುತ್‌ನಿಂದ ಬೆಸುಗೆ ಹಾಕುವವ | | |
| 16 | ಅಳತೆ ಮಾಪಕವನ್ನು ಸರಿ ಮಾಡುವವ [ಗೇಜ್ ರಿಪೇರರ್] | | |
| 17 | ಪ್ರಯೋಗಾಲಯದ ಸಹಾಯಕ | | |
| 18 | ಮೆಷಿನ್ ಆಪರೇಟರ್ | | |
| 19 | ಚರಕಿಯವ [ಟರ್ನರ್] | | |
| 20 | ಬೆಸುಗೆಯವ [ವೆಲ್ಡರ್] | | |
| 21 | ದೂರವಾಣಿ ನಿರ್ವಾಹಕ | | |
| 22 | ಕ್ರೇನ್ ಚಾಲಕ | | |
| 23 | ಕಲ್ಲು ಜಜ್ಜುವವ | | |
| 24 | ಭಾರಿ ಸುತ್ತಿಗೆ ಕೆಲಸದವ | | |
| 25 | ಸಿಡಿಸುವವ | | |
| 26 | ಕಲ್ಲಿನ ಕೆಲಸದವ [ಸ್ಟೋನ್ ಕ್ರಷರ್] | | |
| 27 | ನೆಲ ನುಣುಪುಗೊಳಿಸುವವ [ಪಾಲೀಶ್ ಮಾಡುವವ] | | |
| 28 | ಕಟಮೊಳೆ ಹೊಡೆಯುವವ [ರಿವೀಟರ್] | | |
| 29 | ಗಾರೆಯವ | | |
| 30 | ನುಣುಪುಗಾರ | | |
| 31 | ಪಂಪ್ ಚಾಲಕ | | |
| 32 | ಕಲ್ಲು ನುಣುಪುಗೊಳಿಸುವವ | | |
| 33 | ಸರಳು ಬಗ್ಗಿಸುವವ | | |
| 34 | ಡ್ರೈವರ್ | | |

| | | | |
|---|---|---|---|
| 35 | ಕಲ್ಲಿನಲ್ಲಿ ಕಟಮೊಳೆ ಹೊಡೆಯುವವ [ಸ್ಟೋನ್ ರಿವೀಟ್‌ಮೆಂಟ್ ಬಿಲ್ಡರ್] ವಿದ್ಯುತ್ ಶಾಸ್ತ್ರ ಜ್ಞ [ಎಲೆಕ್ಟ್ರೀಷಿಯನ್] | | |
| 36 | ಮೇಸ್ತ್ರಿ ಅಥವಾ ಮೇಲ್ವಿಚಾರಕ 1ನೇ ದರ್ಜೆಯ ಗುಮಾಸ್ತ | | |
| 37 | ತೋಟಗಾರಿಕಾ ಸೂಪರ್‌ವೈಸರ್ | | |
| 38 | ಶೋವೆಲ್ ಮತ್ತು ಸ್ಕಾರ್‌ವರ್ | | |
| **ಅರೆ ಕುಶಲ** | | | |
| 1 | ಶುಚಿಗೊಳಿಸುವವ | | |
| 2 | ಕಲ್ಲರಗನ್ನು ಚಿಮುಕಿಸುವವ[ಅಸ್ಟಾಲ್ಸ್ ಸ್ಟ್ರೀಯರ್] | | |
| 3 | ಕೊರೆಯುವವ [ಡ್ರಿಲ್ಲರ್] | | |
| 4 | ಸವರಗಣಿ ಅಥವಾ ಚವಲಿ | | |
| 5 | ಸುಣಪು ಬಳಿಯುವವ | | |
| 6 | ಬಣ್ಣ ಬಳಿಯುವವ | 110-00 | 109-00 |
| 7 | ಡ್ರೈವರ್ | | |
| 8 | ಮರ ಕೊಯ್ಯುವವ | | |
| 9 | ಜೋಡಕನಿಗೆ ಸಹಾಯಕ | | |
| 10 | ತೋಟ ಮಾಲಿ [ಗಾರ್ಡನರ್] | | |
| 11 | ಅಡಿಗೆಯವ | | |
| 12 | ಅಗಸ | | |
| 13 | ನಿರ್ವಾಹಕ | | |
| 14 | ಉಸ್ತುವಾರಿ ನೋಡುವವ [ಕೇರ್ ಟೇಕರ್] | | |
| 15 | ಸುತ್ತಿಗೆ ಕೆಲಸದವ | | |
| 16 | ಲಿಫ್ಟ್ ಚಾಲಕ | | |
| 17 | ಬಿದಿರಿನ ಪರದೆ ಮಾಡುವವನು [ಚಿಕ್ ಮೇಕರ್] | | |
| 18 | ಬಡಗಿಯ ಸಹಾಯಕ | | |
| 19 | ಗುಂಪು ಕೆಲಸದವ [ಗ್ಯಾಂಗ್‌ಮನ್] | | |
| 20 | ಅಂಬಿಗ | | |
| 21 | ಗಡಾರಿ ಕೆಲಸದವ [ಜಂಪರ್ ಮನ್] | | |
| 22 | ಇಟ್ಟಿಗೆ ಮಾಡುವವ | | |
| 23 | ಕಲ್ಲರಗು ಬೇಯಿಸುವವ | | |
| 24 | ಸುಣ್ಣ ಕಲ್ಲು ಸುಡುವವ | | |
| 25 | ಗಾರೆ ಮತ್ತು ಇಟ್ಟಿಗೆ ಕೆಲಸದವ [2ನೇ ದರ್ಜೆ] | | 109-00 |
| 26 | ಬಡಗಿ [2ನೇ ದರ್ಜೆ] | 110-00 | |
| 27 | ಜೋಡಕ [2ನೇ ದರ್ಜೆ] | | |
| 28 | ಮೆಕ್ಯಾನಿಕ್ [2ನೇ ದರ್ಜೆ] | | |
| 29 | ವಿದ್ಯುತ್ ತಂತಿ ಕೆಲಸದವ [ವೈರ್‌ಮನ್/ಗುಮಾಸ್ತ ದರ್ಜೆ] | | |
| 30 | ಸ್ಟೋನ್ ವಡ್ಡರ್ | | |
| 31 | ಡೀಸರ್ ಕಂಪ್ರೆಸರ್ ಆಪರೇಟರ್ | | |
| 32 | ಫೈರ್ ಮ್ಯಾನ್ ಇನ್ ಬ್ರಿಕ್ ಪ್ಲಾಂಟ್ಸ್ | | |
| 33 | ಮಾಲಿ ತರಬೇತಿ ಪಡೆದ ಸರ್ಟಿಫಿಕೇಟ್ ಹೊಂದಿರುವವರು | | |
| 34 | ಬಿಸಿ ಸಹಿತ ವಾಟರ್ ಬ್ಯಾಗ್ | | |
| 35 | ಹಾರ್ಟಿಕಲ್ಚರಲ್ ಗಾರ್ಡನರ್ | | |
| 36 | ಗ್ಲೇಯರ್ | | |
| 37 | ಪಟ್ಯಾಲಿಗಳು | | |
| 38 | ಟೈಲ್ ಲೇಯರ್ [ಗ್ಲೇಸ್ಡ್ ಮೊಸಾಯಿಕ್ ಟೈಲ್ಸ್ ಇತರೆ] | | |
| 39 | ಮೇಸನ್ | | |
| 40 | ಟ್ರೇಸರ್ [ಸರ್ಟಿಫಿಕೇಟ್ ಹೊಂದಿರುವವರು] | | |
| 42 | ಕುಶಲಿಯಲ್ಲದ [ಭಾರದ ಕೆಲಸ] | | |
| 43 | ಕುಶಲಿಯಲ್ಲದ [ಹಗುರ ಕೆಲಸ] | | |

| | | | |
|---|---|---|---|
| 44 | ಅಕ್ಷರಸ್ಥ ಕೂಲಿ | 110-98 | 109-41 |
| 45 | ವಾಚ್‌ಮನ್ | | |
| 46 | ಸ್ವೀಪರ್ / ಸ್ಕಾವೆಂಜರ್ | | |
| 47 | ಬಿಲ್ಲೋವರ್ | | |
| 48 | ಮುಖ್ಯ ಮಜ್ದೂರ್ | | |
| 49 | ಬ್ಲೂಪ್ರಿಂಟರ್ | | |
| 50 | ಜೋಡಿ ಎತ್ತುಗಳ ಗಾಡಿಯವ | 115-00 | 112-00 |
| 51 | ಒಂದೆತ್ತಿನ ಗಾಡಿಯವ | | |
| 52 | ಪದವೀಧರ ನೌಕರ | | |
| 53 | ಇಂಜಿನಿಯರಿಂಗ್ ಡಿಪ್ಲೊಮೊ ನೌಕರ | 125-00 | 118-00 |
| 54 | ಇಂಜಿನಿಯರಿಂಗ್ ಪದವೀಧರ ನೌಕರ | 130-00 | 124-00 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3196 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

**ವಲಯ-1** : ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳು ಮತ್ತು ಗೊತ್ತುಪಡಿಸಿದ ಜಿಲ್ಲಾ ಕೇಂದ್ರ ಮತ್ತು ಆಗ್ಲೋಮರೇಷನ್ ಪ್ರದೇಶಗಳು. [ಕಾರ್ಪೊರೇಷನ್ ಇರುವ ಪಟ್ಟಣಗಳು]

**ವಲಯ-2** : ವಲಯ-1 ರಲ್ಲಿ ನಮೂದಿಸದೇ ಇರುವ ರಾಜ್ಯದ ಇತರೇ ಪ್ರದೇಶಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ,. ಡಿಸೆಂಬರ್ ೧೯, ೨೦೦೮ (ಮಾರ್ಗಶಿರ ೨೮, ಶಕ ವರ್ಷ ೧೯೩೦) | ನಂ. ೧೩೪೪ |
|---|---|---|

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ನಂ : ಕಾಇ : 96 : ಎಲ್ಎಂಡಬ್ಲ್ಯೂ : 2008, ಬೆಂಗಳೂರು, ದಿನಾಂಕ : 3ನೇ ನವೆಂಬರ್, 2008**

ಕರ್ನಾಟಕ ರಾಜ್ಯಾದ್ಯಂತ "**ಗ್ಲಾಸ್ ಅಂಡ್ ಗ್ಲಾಸ್‌ವೇರ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಟ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂಖ್ಯೆ: (XI) 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1) ನೇ ಉಪ ಪ್ರಕರಣದ (ಬಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ / ಆಕ್ಷೇಪಣೆಗಳೇನಾದರು ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಇಲ್ಲವೇ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಟ ವೇತನ ಕಾಯ್ದೆ 1948ರ ಅಧಿನಿಯಮ 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ "**ಗ್ಲಾಸ್ ಅಂಡ್ ಗ್ಲಾಸ್‌ವೇರ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರಮ ಸಂಖ್ಯೆ | ಕೆಲಸದ ವರ್ಗಗಳು | ಕನಿಷ್ಟ ವೇತನ ದರಗಳೂ ಪ್ರತಿ ತಿಂಗಳಿಗೆ | |
|---|---|---|---|
| | | ವಲಯ-1 | ವಲಯ-2 |
| 1 | 2 | 3 | 4 |
| **ಅ. ಅತಿ ಕುಶಲ ಕಾಮಿಕರು** | | | |
| 1 | ಫೋರ್‌ಮನ್ | 3427-72 | 3361-57 |
| 2 | ಸೀನಿಯರ್ ಗ್ಲಾಸ್ ಟೆಕ್ನಾಲಜಿಸ್ಟ್ | | |
| 3 | ಗ್ಲಾಸ್‌ಬ್ಲೋಯರ್ | | |
| 4 | ಮ್ಯಾನೇಜರ್ | 3287-02 | 3220-87 |
| 5 | ಸೂಪರ್‌ವೈಸರ್ | | |
| 6 | ಜ್ಯೂನಿಯರ್ ಟೆಕ್ನೀಷಿಯನ್ | | |
| **ಆ. ಕುಶಲ ಕಾರ್ಮಿಕರು** | | | |
| 1 | ಮೆಕ್ಯಾನಿಕ್ | 3262-87 | 3196-72 |
| 2 | ಎಲೆಕ್ಟ್ರಿಷಿಯನ್ | | |
| 3 | ವೈರ್‌ಮ್ಯಾನ್ | | |
| 4 | ವೆಲ್ಡರ್ | | |
| 5 | ಡಿ.ಜಿ. ಆಪರೇಟರ್ / ಹೆವಿ ಪ್ರೆಸ್ ಆಪರೇಟರ್ / ಫೀಡರ್ ಆಪರೇಟರ್ ಕಮ್ ಮೆಷಿನಿಸ್ಟ್ | | |
| 6 | ಫಿಟ್ಟರ್/ಟರ್ನರ್ | | |
| 7 | ಕೆಮಿಕಲ್ ಮಿಕ್ಸರ್ | | |
| 8 | ಡೈ ಮೇಕರ್ | | |
| 9 | ಸ್ಕ್ರೀನ್ ಮೇಕರ್ | | |
| 10 | ಫರ್ನೇಸ್ ಆಪರೇಟರ್ | | |
| 11 | ಫರ್ನೇಸ್ ಮೇಸನ್ | | |
| 12 | ಪ್ಯಾಟರನ್ ಮೇಕರ್ | | |
| 13 | ಮೌಲ್ಡ್ ಎನ್ ಗ್ರೇವರ್ | | |

| 1 | 2 | 3 | 4 |
|---|---|---|---|
| 14 | ಬ್ಲಾಕ್ ಸ್ಮಿತ್ | 3262-87 | 3196-72 |
| 15 | ಗ್ರೈಂಡಿಗ್ ಮೆಷಿನ್ ಆಪರೇಟರ್ | | |
| 16 | ಶೇಪರ್ ಮತ್ತು ಪ್ಲೈನರ್ | | |
| 17 | ಡೀಸೆಲ್ ಮೆಕ್ಯಾನಿಕ್ | | |
| 18 | ಕ್ರೇನ್ ಆಪರೇಟರ್ | | |
| 19 | ಬಫರ್ ಆಪರೇಟರ್ | | |
| 20 | ಮೌತ್ ಬ್ಲೋಯರ್ | | |
| 21 | ಗ್ಲಾಸ್ ಪಾಲಿಷರ್ | | |
| 22 | ಮೌಲ್ಡ್ ಮೇಕರ್ | | |
| 23 | ಸ್ಟೋರ್ ಕೀಪರ್ | | |
| 24 | ಇತರೆ ಕುಶಲ ಕೆಲಸಕ್ಕೆ | | |
| 25 | ಡ್ರೈವರ್ | 3050-71 | 2988-82 |
| 26 | ಎಂಜಿನ್ ಡ್ರೈವರ್ | | |
| **ಇ. ಅರೆ ಕುಶಲ ಕಾರ್ಮಿಕರು** | | | |
| 1 | ಗ್ಲಾಸ್ ಕಟ್ಟರ್ಸ್ | 2851-27 | 2840-77 |
| 2 | ಸ್ಟೀಮ್ ಆಪರೇಟರ್ | | |
| 3 | ವ್ಯಾಕ್ಯೂಮ್ ಆಪರೇಟರ್ | | |
| 4 | ಸಹಾಯಕ ಆಪರೇಟರ್ | | |
| 5 | ಗ್ಲಾಸ್ ಕಟ್ಟಡ ಮಾಡುವವ | | |
| 6 | ಗ್ಲಾಸ್ ಪೇಸ್ಟ್ | | |
| 7 | ಸ್ಯಾಂಪಲ್ ಚಕ್ಕರ್ | | |
| 8 | ಆಯಿಲ್ ಮನ್ | | |
| 9 | ಸಾಫ್ಟರ್ | | |
| 10 | ಕ್ರಷರ್ | | |
| 11 | ಮೆಷಿನ್ ಆಪರೇಟರ್ | | |
| 12 | ಏರ್‌ಮನ್ | | |
| 13 | ಗ್ಲಾಸ್ ಎಡ್ಜ್ ಗ್ರೈಂಡರ್ | | |
| 14 | ಗ್ಲಾಸ್ ಫ್ರಾಸ್ಟರ್ | | |
| 15 | ಅವರ್ ಮನ್ | | |
| 16 | ಬ್ಲೋನ್ ಆರ್ಟಿಕಲ್ ಸಾರ್ಟರ್ | | |
| 17 | ಸಾರ್ಟರ್ | | |
| 18 | ಪ್ರೆಸ್ ಅವರ್‌ಮೆನ್ | | |
| **ಈ. ಕುಶಲರಲ್ಲದವರು** | | | |
| 1 | ಸ್ಟೀಮ್ ಅಪರೇಟರ್ ಹೆಲ್ಪರ್ | 2851-27 | 2840-77 |
| 2 | ಗ್ಲಾಸ್ ಕಟ್ಟರ್ಸ್ ಹೆಲ್ಪರ್ | | |
| 3 | ಹೆಲ್ಪರ್ | | |
| 4 | ಸಹಾಯಕ ಗ್ಲಾಸ್ ಪಾಲೀಷರ್ | | |
| 5 | ಪ್ಯಾಕರ್ | | |
| 6 | ಫರ್ನೆಸ್ ವಿಭಾಗದಲ್ಲಿ ಕಲ್ಲಿದ್ದಲು ಮತ್ತು ಬೂದಿಯನ್ನು ಸಾಗಿಸುವವರು | | |
| 7 | ಲೋಡರ್ ಮತ್ತು ಅನಲೋಡರ್ | | |
| 8 | ಮೌಲ್ಡ್ ಹೋಲ್ಡರ್ | | |
| 9 | ವಾಚ್‌ಮೆನ್ | | |
| 10 | ಲೇಬಲ್ ಹಚ್ಚುವವ | | |
| 11 | ಸುರಳಿ ಸುತ್ತುವವರು | | |

| 1 | 2 | 3 | 4 |
|---|---|---|---|
| 12 | ಜನರಲ್ ಮಜ್ದೂರ್ | | |
| 13 | ಹೊಲಿಯುವವ | | |
| 14 | ಕ್ಲೀನರ್ | | |
| 15 | ಪ್ಯೂನ್ | | |
| 16 | ಸ್ವೀಪರ್/ಸ್ಕಾವೆಂಜರ್/ಮೇಲೆ ಕಾಣಿಸದ ಇತರೇ ಕುಶಲರಲ್ಲದ ಕಾರ್ಮಿಕರು | | |
| | **ಊ. ಕಛೇರಿ ಸಿಬ್ಬಂದಿ** | | |
| 1 | ಅಕೌಂಟೆಂಟ್ | 3130-55 | 3096-97 |
| 2 | ಶೀಘ್ರಲಿಪಿಗಾರ | | |
| 3 | ಗುಮಾಸ್ತ | | |
| 4 | ಬೆರಳಚ್ಚುಗಾರ | | |
| 5 | ಟೈಂ ಕೀಪರ್ | 2956-27 | 2900-62 |
| 6 | ಆಫೀಸ್ ಬಾಯ್ | 2851-27 | 2840-77 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3198 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.

(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.

(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

9. **ಅತಿ ಕುಶಲ** : ಅತಿ ಕುಶಲ ಕೆಲಸಗಾರರು ಎಂದರೆ ಯಾರು ಹೆಚ್ಚಿನ ನೈಪುಣ್ಯತೆಯ ಕೆಲಸವನ್ನು ನಿಖರವಾಗಿ ಮಾಡಬಲ್ಲವರಾಗಿದ್ದು, ನಕ್ಷೆಯನ್ನು ಓದಬಲ್ಲ ಮತ್ತು ಅದರ ಆಧಾರದ ಮೇಲೆ ಕೆಲಸ ಮಾಡಬಲ್ಲವರಾಗಿದ್ದು, ಅವರ ವಿಭಾಗದ ಕುಶಲ ಮತ್ತು ಇತರೇ ಕೆಲಸಗಾರರ ಕೆಲಸವನ್ನು ನಿರ್ದೇಶಿಸಬಲ್ಲ ಸಾಮರ್ಥ್ಯವುಳ್ಳವರಾಗಿದ್ದು, ಆ ವಿಭಾಗದ ಕೆಲಸವನನು ಸ್ವತಂತ್ರವಾಗಿ ನಿರ್ವಹಿಸಿಕೊಂಡು ಹೋಗಬಲ್ಲವರಾಗಿರಬೇಕು.

10. **ಕುಶಲ** : ಕುಶಲ ಕೆಲಸಗಾರರು ಅಂದರೆ ಸ್ವತಂತ್ರವಾಗಿ, ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ, ಅವಶ್ಯವಿದ್ದರೆ ಸರಳವಾದ ನಕ್ಷೆಗಳನ್ನು ಓದಿ ಮತ್ತು ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.

11. **ಅರೆ ಕುಶಲ** : ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರ ಉಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.

12. **ಕುಶಲರಲ್ಲದವರು** : ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನುಗಳ ಜ್ಞಾನವಿರುವ ಕೆಲಸವನ್ನು ಮಾಡುವವರು.

ಯಾವುದೇ ಯಂತ್ರಗಳನ್ನು ನಡೆಸಲು ನೇಮಿಸಿರುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಾರದು. ಕಾವಲುಗಾರ, ಸಿಪಾಯಿ, ಚೌಕೀದಾರ, ಕಸ ಗುಡಿಸುವವರು, ಜಾಡಮಾಲಿ ಹಾಗೂ ಅದೇ ತರಹದ ಕೆಲಸ ಮಾಡುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸುವುದು.

ವಲಯ-1 : ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳು ಮತ್ತು ಗೊತ್ತುಪಡಿಸಿದ ಜಿಲ್ಲಾ ಕೇಂದ್ರ ಮತ್ತು ಆಗ್ಲೋಮರೇಷನ್ ಪ್ರದೇಶಗಳು. [ಕಾರ್ಪೊರೇಷನ್ ಇರುವ ಪಟ್ಟಣಗಳು]

**ವಲಯ-2** : **ವಲಯ-1 ರಲ್ಲಿ ನಮೂದಿಸದೇ ಇರುವ ರಾಜ್ಯದ ಇತರೇ ಪ್ರದೇಶಗಳು**.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

ಭಾಗ – **IV-A** | **ಬೆಂಗಳೂರು, ಶುಕ್ರವಾರ,. ಡಿಸೆಂಬರ್ ೧೯, ೨೦೦೮ (ಮಾರ್ಗಶಿರ ೨೮, ಶಕ ವರ್ಷ ೧೯೩೦)** | **ನಂ. ೧೩೪೫**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ನಂ : ಕಾಇ : 97 : ಎಲ್‌ಎಂಡಬ್ಲ್ಯೂ : 2008, ಬೆಂಗಳೂರು, ದಿನಾಂಕ : 31ನೇ ಅಕ್ಟೋಬರ್, 2008**

ಕರ್ನಾಟಕ ರಾಜ್ಯಾದ್ಯಂತ "**ಕ್ಲಬ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಟ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂಖ್ಯೆ: (XI) 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1) ನೇ ಉಪ ಪ್ರಕರಣದ (ಬಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾಧಿತರಾಗುವ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ / ಆಕ್ಷೇಪಣೆಗಳೇನಾದರು ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಇಲ್ಲವೇ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಟ ವೇತನ ಕಾಯ್ದೆ 1948ರ ಅಧಿನಿಯಮ 3ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಮತ್ತು 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ

ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ "**ಕ್ಲಬ್**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರಮ ಸಂಖ್ಯೆ | ಕೆಲಸದ ವರ್ಗಗಳು | ತಿಂಗಳಿಗೆ ಕನಿಷ್ಟ ವೇತನ ದರಗಳು [ರೂಪಾಯಿ] |
|---|---|---|
| 1 | 2 | 3 |
| | **ಅ. ಅತಿ ಕುಶಲ ಕಾರ್ಮಿಕರು** | |
| 1 | ಮ್ಯಾನೇಜರ್ | 3424-57 |
| 2 | ಅಸಿಸ್ಟೆಂಟ್ ಮ್ಯಾನೇಜರ್ | 3178-87 |
| 3 | ಸೂಪರ್‌ವೈಸರ್ | |
| 3 | ಅಕೌಂಟೆಂಟ್ | |
| 4 | ಸ್ಟೀವರ್ಡ್ | |
| 5 | ಹೆಡ್ ಕುಕ್/ಸ್ವಿಮ್ಮಿಂಗ್ ಕೋಚ್ | |
| | **ಆ. ಕುಶಲ ಕಾರ್ಮಿಕರು** | |
| 1 | ಟೈಪಿಸ್ಟ್ / ಕ್ಲರ್ಕ್ | 3077-02 |
| 2 | ಟೆಲಿಫೋನ್ ಆಪರೇಟರ್ | |
| 3 | ಬಾರ್‌ಮ್ಯಾನ್ | |
| 4 | ಎಲೆಕ್ಟ್ರಿಷಿಯನ್ | |
| 5 | ಅಸಿಸ್ಟೆಂಟ್ ಕುಕ್ | |
| 6 | ಬೇರರ್ | |
| | **ಇ. ಕುಶಲರಲ್ಲದ ಕಾರ್ಮಿಕರು** | |
| 1 | ಮಾರ್ಕರ್ | **3063-37** |
| 2 | ವಾಚ್‌ಮೆನ್ | |
| 3 | ಸ್ವೀಪರ್/ಕ್ಲೀನರ್ | |
| 4 | ಗಾರ್ಡನರ್ | |
| 5 | ಪಿಕ್ಕರ್ | |
| 6 | ಸ್ಕಾವೆಂಜರ್ | |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3196 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.

2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.

3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.

6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.

7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.

8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಡಿಸೆಂಬರ್ ೨೦, ೨೦೦೮ (ಮಾರ್ಗಶಿರ ೨೯, ಶಕ ವರ್ಷ ೧೯೩೦) | ನಂ. ೧೩೪೬ |
|---|---|---|

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ನಅಇ 132 ಎಂಎನ್‌ಜಿ 2008, ಬೆಂಗಳೂರು, ದಿನಾಂಕ 18ನೇ ಡಿಸೆಂಬರ್, 2008**

ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) 421ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ರಚಿಸಲು ಉದ್ದೇಶಿಸಿರುವ ಕರ್ನಾಟಕ ಪೌರ ನಿಗಮಗಳ (ಬೀದಿಗಳು, ವೃತ್ತಗಳು, ಚೌಕಗಳು, ಪಾರ್ಕುಗಳು, ಉದ್ಯಾನಗಳು ಅಥವಾ ಯಾವುದೇ ಇತರ ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದು) ನಿಯಮಗಳು, 2008ರ ಕರಡನ್ನು, ಸದರಿ ಅಧಿನಿಯಮದ 421ನೇ ಪ್ರಕರಣದ (3)ನೇ ಉಪ ಪ್ರಕರಣದ ಮೇರೆಗೆ ಅಗತ್ಯಪಡಿಸಲಾದಂತೆ ಈ ಮೂಲಕ, ಇದರಿಂದ ಬಾಧಿತರಾಗುವ ಸಂಭವವಿರುವ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಸದರಿ ಕರಡಿನ ಸಂಬಂಧದಲ್ಲಿ, ಮೇಲೆ ಹೇಳಿದ ಅವಧಿ ಮುಕ್ತಾಯವಾಗುವುದಕ್ಕಿಂತ ಮೊದಲು ಯಾರೇ ವ್ಯಕ್ತಿಯಿಂದ ರಾಜ್ಯ ಸರ್ಕಾರಕ್ಕೆ ಬಂದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, 4ನೇ ಮಹಡಿ, ವಿಕಾಸಸೌಧ, ಡಾ॥ ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು – 560001 ಇವರಿಗೆ ಸಲ್ಲಿಸಬಹುದಾಗಿದೆ.

### ಕರಡು ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ.–** (1)ಈ ನಿಯಮಗಳನ್ನು ಕರ್ನಾಟಕ ಪೌರ ನಿಗಮಗಳ (ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದು) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ನಿಯಮಗಳಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ,–

(ಎ) "ಅಧಿನಿಯಮ" ಎಂದರೆ, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14);

(ಬಿ) "ನಮೂನೆ" ಎಂದರೆ ಈ ನಿಯಮಗಳಿಗೆ ಅನುಬಂಧಿಸಲಾದ ನಮೂನೆ;

(ಸಿ) "ಮೇಯರ್" ಎಂದರೆ ನಗರಪಾಲಿಕೆ ಅಥವಾ ವಿಶಾಲ ನಗರ ಪ್ರದೇಶದ ಮೇಯರ್;

(ಡಿ) "ಸಾರ್ವಜನಿಕ ಸ್ಥಳ" ಎಂದರೆ ನಗರ ಪಾಲಿಕೆಗೆ ಸೇರಿದ ಅಥವಾ ಈ ಅಧಿನಿಯಮದ ಬಲದ ಮೂಲಕ ಅದರಲ್ಲಿ ನಿಹಿತವಾಗಿರುವಂಥ ಯಾವುದೇ ಬೀದಿ, ವೃತ್ತ, ಚೌಕ, ಪಾರ್ಕು, ಆಟದ ಮೈದಾನ, ಉದ್ಯಾನ ಅಥವಾ ಯಾವುದೇ ಇತರ ಸಾರ್ವಜನಿಕ ಸ್ಥಳ ಮತ್ತು ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಯಾವುದೇ ಇತರ ಸ್ಥಳವನ್ನು ಒಳಗೊಳ್ಳುತ್ತದೆ;

(ಇ) "ಪ್ರಕರಣ" ಎಂದರೆ, ಅಧಿನಿಯಮದ ಒಂದು ಪ್ರಕರಣ.

**3. ರಿಜಿಸ್ಟರನ್ನು ನಿರ್ವಹಿಸುವುದು.–** ಪ್ರತಿಯೊಂದು ನಿಗಮವು, ಸಾರ್ವಜನಿಕ ಸ್ಥಳಗಳ ಪ್ರತಿಯೊಂದು ವರ್ಗಕ್ಕೆ ಸಂಬಂಧಿಸಿದಂತೆ, ನಮೂನೆ–1ರಲ್ಲಿ ಹೇಳಿರುವ ವಿವರಣೆಗಳನ್ನು ಒಳಗೊಂಡಿರುವ ಒಂದು ಪ್ರತ್ಯೇಕವಾದ ರಿಜಿಸ್ಟರನ್ನು ನಿರ್ವಹಿಸತಕ್ಕದ್ದು. ಅಂಥ ರಿಜಿಸ್ಟರ್‌ನಲ್ಲಿ ಒಳಗೊಂಡಿರುವ ವಿಷಯಗಳನ್ನು, ಸಾಂಕೇತಿಕ ಶುಲ್ಕಗಳನ್ನು ಸಂದಾಯ ಮಾಡಿದ ಮೇಲೆ ಸಾರ್ವಜನಿಕರಿಗೆ ದೊರೆಯುವಂತೆ ಮಾಡತಕ್ಕದ್ದು.

**4. ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದರ ಉದ್ದೇಶ.–** ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವುದರ ಪ್ರಧಾನ ಉದ್ದೇಶವೆಂದರೆ, ಸುಸಂಗತ ವಿಳಾಸ ವ್ಯವಸ್ಥೆಯನ್ನು ಮಾಡುವುದು ಮತ್ತು ಬಟವಾಡೆ ಸೇವಾ ವ್ಯವಸ್ಥೆಯಲ್ಲಿ ದಕ್ಷತೆಯನ್ನು ಹೆಚ್ಚಿಸುವುದು ಮತ್ತು ಸಮನ್ವಯಗೊಳಿಸುವುದಾಗಿರುತ್ತದೆ. ಇತರ ಪ್ರಮುಖ ಉದ್ದೇಶಗಳೆಂದರೆ,–

(ಎ) ಅಂಚೆ ಬಟವಾಡೆ ಮತ್ತು ಸೇವಾ ವ್ಯವಸ್ಥೆಯನ್ನು ಸುಧಾರಿಸುವ ಮೂಲಕ ನಿವಾಸಿಗಳ ಜೀವನಮಟ್ಟ ಸುಧಾರಿಸುವುದು;

(ಬಿ) ಆಸ್ತಿ ತೆರಿಗೆಯ ಸೂಕ್ತ ನಿರ್ವಹಣೆ, ವಾರ್ಡ್ ಕಾಮಗಾರಿಗಳು ಮತ್ತು ಅಗತ್ಯ ಮೂಲ ಸೌಕರ್ಯಗಳನ್ನು ಒದಗಿಸುವಲ್ಲಿ ಸ್ಥಳೀಯ ಸಂಸ್ಥೆಗಳಿಗೆ ನೆರವಾಗುವುದು;

(ಸಿ) ನಿವಾಸಿಗಳ ಮತ್ತು ಕಾರ್ಯಸಂಸ್ಥೆಗಳ ವಿಳಾಸ ಸ್ಥಳಗಳನ್ನು ಹೆಚ್ಚು ಸರಳಗೊಳಿಸುವುದು;

(ಡಿ) ಪ್ರಖ್ಯಾತ ವ್ಯಕ್ತಿಗಳು ಸಲ್ಲಿಸಿರುವ ಸಾರ್ವಜನಿಕ ಸೇವೆಗೆ ಮನ್ನಣೆ ನೀಡಿ ಸ್ಮರಿಸಿಕೊಳ್ಳುವಂತೆ ಮಾಡುವುದು.

**5. ಸಾರ್ವಜನಿಕ ಸ್ಥಳದ ನಾಮಕರಣ ಮಾಡುವ ಪದ್ಧತಿ.–** ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವಾಗ ವಿಶಿಷ್ಟ ವ್ಯಕ್ತಿಯ ಹೆಸರುಗಳನ್ನು ಬಳಸತಕ್ಕದ್ದು. ಈ ಹೆಸರುಗಳನ್ನು, ಸಾರ್ವಜನಿಕ ಸೇವೆ, ಸಾಹಿತ್ಯ, ಕಲೆ, ಶಿಕ್ಷಣ, ಕ್ರೀಡೆಗಳ ಕ್ಷೇತ್ರದಲ್ಲಿ ಬಹುತೇಕ ಆ ಪ್ರದೇಶದವರೇ ಆಗಿರುವ, ಗಣನೀಯ ಸೇವೆ ಸಲ್ಲಿಸಿರುವ ಪ್ರಮುಖ ವ್ಯಕ್ತಿಗಳ ಹೆಸರುಗಳಿಂದ ಅಥವಾ ಐತಿಹಾಸಿಕ ಪ್ರಾಮುಖ್ಯತೆಯುಳ್ಳ ವ್ಯಕ್ತಿಗಳು ಅಥವಾ ಘಟನೆಗಳಿಂದ ಸುದೀರ್ಘ ಕಾಲದಿಂದ ಜನಪ್ರಿಯವಾಗಿ ಬಳಕೆಯಲ್ಲಿದ್ದು ಆ ಪ್ರದೇಶದಲ್ಲಿ ಸಹಜವಾಗಿ ಪರಿಚಿತವಾಗಿರುವ ಹೆಸರುಗಳಿಂದ ಆಯ್ಕೆ ಮಾಡಿಕೊಳ್ಳತಕ್ಕದ್ದು.

**6. ರಸ್ತೆಗಳಿಗೆ ನಾಮಕರಣ ಮಾಡುವ ರೂಢಿ.–** ಬೀದಿಯ ಹೆಸರು ಎಂಬುದು ಎರಡು ಭಾಗಗಳನ್ನು ಒಳಗೊಂಡಿರತಕ್ಕದ್ದು, ಮೊದಲನೆಯದು ಹೆಸರು ಮತ್ತು ಎರಡನೆಯದು ಮಾದರಿ. ಎರಡನೆಯದು ರಸ್ತೆಯ ಮುಖ್ಯ ಭಾಗವನ್ನು ಮಾತ್ರ ಸೂಚಿಸತಕ್ಕದ್ದು. ಪ್ರಮುಖ ರಸ್ತೆಗಳಿಗೆ ನಾಮಕರಣ ಮಾಡುವುದಕ್ಕಾಗಿ 5ನೇ ನಿಯಮದಲ್ಲಿ ಹೇಳಿರುವ ಅಂಕಿತ ನಾಮಗಳನ್ನು ಉಪಯೋಗಿಸತಕ್ಕದ್ದು. ಸಂಖ್ಯೆಗಳು ಅಂಕಿತನಾಮಗಳಾಗಿಲ್ಲದಿರುವುದರಿಂದ ಅವುಗಳನ್ನು ಒಳರಸ್ತೆಗಳು ಮತ್ತು ಅಡ್ಡರಸ್ತೆಗಳಿಗೆ ಹೆಸರುಗಳಿಗಾಗಿ ಉಪಯೋಗಿಸತಕ್ಕದ್ದು.

**7. ರಸ್ತೆಗಳ ಹೆಸರುಗಳಲ್ಲಿ ಪುನರಾವರ್ತನೆ ಇರಬಾರದು.–** ಸಾಮಾನ್ಯವಾಗಿ ಒಂದು ನಗರ ಪಾಲಿಕೆಯ ಪ್ರದೇಶದೊಳಗಿನ ಯಾವುವೇ ಎರಡು ಬೀದಿಗಳು, ವೃತ್ತಗಳು, ಚೌಕಗಳು, ಪಾರ್ಕ್‌ಗಳು, ಉದ್ಯಾನಗಳು, ಯಾವುದೇ ಇತರ ಸಾರ್ವಜನಿಕ ಸ್ಥಳಗಳು, ಒಂದೇ ರೀತಿಯ ಹೆಸರನ್ನು ಹೊಂದಿರತಕ್ಕದ್ದಲ್ಲ.

**8. ಸಾರ್ವಜನಿಕ ಸ್ಥಳಕ್ಕೆ ನಾಮಕರಣ ಮಾಡುವಾಗ ಅನುಸರಿಸಬೇಕಾದ ಕಾರ್ಯ ವಿಧಾನ.–** ಅಧಿನಿಯಮದ 293ನೇ ಪ್ರಕರಣದ (1)ನೇ ಉಪ ಪ್ರಕರಣದ ಅನುಸಾರ ಯಾವುದೇ ಸಾರ್ವಜನಿಕ ಸ್ಥಳಕ್ಕೆ ಹೆಸರಿಡುವುದಕ್ಕೆ ಸಂಬಂಧಿಸಿದಂತೆ, ನಗರಪಾಲಿಕೆ ಅಭಿಪ್ರಾಯಪಟ್ಟರೆ ಅಥವಾ ಅದು, ಯಾರೇ ವ್ಯಕ್ತಿಯಿಂದ ಪ್ರಸ್ತಾವ ಸ್ವೀಕರಿಸಿದರೆ, ನಗರಪಾಲಿಕೆಯು ಈ ಮುಂದೆ ಹೇಳಿರುವ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ನಾಮಕರಣ ಮಾಡತಕ್ಕದ್ದು. ನಾಮಕರಣ ಮಾಡುವುದಕ್ಕೆ ಸಂಬಂಧಿಸಿದ ಪ್ರತಿಯೊಂದು ಪ್ರಸ್ತಾವವನ್ನು, ಸಂಬಂಧಪಟ್ಟ ಸ್ಥಾಯೀ ಸಮಿತಿಯು 5,6 ಮತ್ತು 7ನೇ ನಿಯಮಗಳ ಉಪಬಂಧಗಳ ದೃಷ್ಟಿಯಿಂದ ಪರಿಶೀಲಿಸತಕ್ಕದ್ದು ಮತ್ತು ನಗರ ಪಾಲಿಕೆಯು ಗೊತ್ತುವಳಿಯನ್ನು ಅಂಗೀಕರಿಸತಕ್ಕದ್ದು. ಆನಂತರ ಅದನ್ನು, ಕನಿಷ್ಠ ಎರಡು ವೃತ್ತ ಪತ್ರಿಕೆಗಳಲ್ಲಿ ವಿಶೇಷವಾಗಿ, ಕನ್ನಡ ಪತ್ರಿಕೆಗಳಲ್ಲಿ, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಗೆ ಮಾಹಿತಿಗಾಗಿ ಮತ್ತು ಅದು ಪ್ರಕಟವಾದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸತಕ್ಕದ್ದು. ಮೇಲೆ ಹೇಳಿಕ ಅವಧಿಯೊಳಗೆ ಯಾವುವೇ ಆಕ್ಷೇಪಣೆ ಅಥವಾ ಸಲಹೆಗಳು ಬಂದರೆ, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಪರಿಶೀಲಿಸುವುದಕ್ಕಾಗಿ ನಗರ ಪಾಲಿಕೆಯ ಮುಂದಿನ ಸಭೆಯಲ್ಲಿ ಅವುಗಳನ್ನು ಮಂಡಿಸತಕ್ಕದ್ದು. ರಾಜ್ಯ ಸರ್ಕಾರದ ಯಾವುವೇ ನಿರ್ದೇಶನಗಳಿದ್ದರೆ ಅವುಗಳಿಗೆ ಒಳಪಟ್ಟು ಗೊತ್ತುವಳಿಯನ್ನು ಅಂಗೀಕರಿಸಿದ ಮೇಲೆ ಅದರಂತೆ ನಗರ ಪಾಲಿಕೆಯ ಬೀದಿಗೆ ನಾಮಕರಣ ಮಾಡುವುದಕ್ಕೆ ಕ್ರಮ ಕೈಗೊಳ್ಳತಕ್ಕದ್ದು.

**9. ವಿವಾದ.–** ಬಳಕೆಯಲ್ಲಿರುವ ಹೆಸರಿನ ಸಂಬಂಧದಲ್ಲಿ ವಿರೋಧ ವ್ಯಕ್ತಪಡಿಸಿ ಯಾವುದೇ ವಿವಾದ ಉಂಟಾಗುವ ಸಂಭವವಿದ್ದರೆ, ಸದರಿ ಪ್ರಸ್ತಾವವನ್ನು ಆಯುಕ್ತರು, ಈ ಉದ್ದೇಶಕ್ಕಾಗಿ ಪರಿಷತ್ತಿನಿಂದ ರಚಿತವಾಗಿರುವ ಸ್ಥಾಯಿ ಸಮಿತಿಗೆ ಕಳುಹಿಸತಕ್ಕದ್ದು. ಸ್ಥಾಯಿ ಸಮಿತಿಯು, ವಿವಾದಾತ್ಮಕವೆಂದು ಅಥವಾ ಸಾರ್ವಜನಿಕರಿಗೆ ಉಪದ್ರವಕಾರಿಯಾಗಿದೆ ಎಂದು ತಿಳಿದು ಬಂದರೆ, ಸಾರ್ವಜನಿಕ ಸ್ಥಳದ ಹೆಸರನ್ನು ನಿರ್ಧರಿಸುವ ಅಥವಾ ಬದಲಾಯಿಸುವ ಬಗೆಗಿನ ಪ್ರಸ್ತಾವವನ್ನು ಪರಿಶೀಲಿಸತಕ್ಕದ್ದು ಮತ್ತು ಅದು ತಾನು ಸೂಕ್ತವೆಂದು ಭಾವಿಸಬಹುದಾದಂಥ ರೀತಿಯಲ್ಲಿ ಅಂಥ ಹೆಸರುಗಳನ್ನು ಮಾರ್ಪಾಟು ಮಾಡಲು ಅಥವಾ ಬದಲಾಯಿಸಲು ಶಿಫಾರಸು ಮಾಡತಕ್ಕದ್ದು ಮತ್ತು ತನ್ನ ಶಿಫಾರಸ್ಸನ್ನು ಮಾಡತಕ್ಕದ್ದು ಮತ್ತು ತನ್ನ ಶಿಫಾರಸನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

**10. ಬಳಕೆಯಲ್ಲಿರುವ ಹೆಸರಿನ ಬದಲಾವಣೆ.–** ಬಳಕೆಯಲ್ಲಿರುವ ಸಾರ್ವಜನಿಕ ಸ್ಥಳದ ಹೆಸರನ್ನು, ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೇ ಯಾವುದೇ ಸಂದರ್ಭಗಳಲ್ಲಿ ಬದಲಾವಣೆ ಮಾಡತಕ್ಕದ್ದಲ್ಲ. ಬಳಕೆಯಲ್ಲಿರುವ ಹೆಸರು, ಸ್ಥಳೀಯ ಪರಂಪರೆಗೆ ಅಸಂಗತವಾಗಿದೆ ಎಂದು ಅಥವಾ ಸಮರ್ಥನೀಯವಾದ ಕಾರಣವಿದೆ ಎಂದು ಕಂಡು ಬಂದರೆ ಯಾವುವೇ ಅಂಥ ಬದಲಾವಣೆಗಳನ್ನು ದಾಖಲಿಸತಕ್ಕದ್ದು.

**11. ಸರ್ಕಾರದ ಅನುಮೋದನೆ.–** ಸ್ಥಾಯಿ ಸಮಿತಿಯು ಸಲ್ಲಿಸಿದ ಶಿಫಾರಸುಗಳನ್ನು ಪರಿಶೀಲಿಸಿದ ನಂತರ ಸರ್ಕಾರವು, ಆದೇಶದ ಮೂಲಕ ಸಾರ್ವಜನಿಕ ಸ್ಥಳದ ಹೆಸರನ್ನು ಬದಲಾಯಿಸಲು ತನ್ನ ಅನುಮೋದನೆ ನೀಡಬಹುದು ಅಥವಾ ಅದನ್ನು ತಿರಸ್ಕರಿಸಬಹುದು ಅಥವಾ ಕಾರಣಗಳನ್ನು ದಾಖಲಿಸಿ ಪರ್ಯಾಯವಾಗಿ ಹೊಸ ಹೆಸರನ್ನು ಪ್ರಸ್ತಾವಿಸಬಹುದು.

**12. ಅನುಮೋದನೆಯ ನಂತರ ಕ್ರಮಗಳನ್ನು ಆರಂಭಿಸುವುದು.–** ಸಾರ್ವಜನಿಕ ಸ್ಥಳದ ಹೆಸರನ್ನು ಬದಲಾಯಿಸುವುದಕ್ಕಾಗಿ ಸರ್ಕಾರವು ಅನುಮೋದನೆ ನೀಡಿದ ತರುವಾಯ,–

ಎ) ಆಯುಕ್ತರು, ಯಾವುದೇ ಕಟ್ಟಡದ ಎದ್ದು ಕಾಣುವ ಭಾಗದಲ್ಲಿ ಗೋಡೆ, ಫಲಕ ಅಥವಾ ಸ್ಥಳ ಅಥವಾ ಅಂಥ ಬೀದಿಯ ಅತೀ ಹತ್ತಿರದ ಮೂಲೆ ಅಥವಾ ಪ್ರವೇಶ ದ್ವಾರ ಅಥವಾ ಅಂಥ ಬೀದಿಯ ಅನುಕೂಲಕರವಾದ ಸ್ಥಳದಲ್ಲಿ ಅದು ಯಾವ ಹೆಸರಿನಿಂದ ಸಂಖ್ಯೆಯಿಂದ ಕರೆಯಬೇಕೋ ಆ ಹೆಸರು ಅಥವಾ ಸಂಖ್ಯೆಯನ್ನು ಹಾಕಿಸಲು ಅಥವಾ ಬಣ್ಣದಿಂದ ಬರೆಸುವಂತೆ ಮಾಡತಕ್ಕದ್ದು; ಮತ್ತು

ಬಿ) ಯಾವುದೇ ಸಾರ್ವಜನಿಕ ಸ್ಥಳದ ಹೆಸರನ್ನು, ಸೂಕ್ತ ಅಳತೆಯ ಫಲಕಗಳ ಮೇಲೆ ಹಾಕಿಸಲು ಅಥವಾ ಬಣ್ಣದಿಂದ ಬರೆಸುವಂತೆ ಮಾಡತಕ್ಕದ್ದು.

**13. ದಂಡ.–** (1) ಯಾವುದೇ ಸಾರ್ವಜನಿಕ ಸ್ಥಳದ ಅಂಥ ಯಾವುದೇ ಹೆಸರು ಅಥವಾ ಸಂಖ್ಯೆ ಅಥವಾ ಉಪ ಸಂಖ್ಯೆಯನ್ನು ನಾಶಪಡಿಸತಕ್ಕದ್ದಲ್ಲ, ಅಳಿಸಿಹಾಕತಕ್ಕದ್ದಲ್ಲ, ವಿರೂಪಗೊಳಿಸತಕ್ಕದ್ದಲ್ಲ. ಅಥವಾ ಯಾವುದೇ ವಿಧದಲ್ಲಿ

ಹಾನಿಗೊಳಿಸತಕ್ಕದ್ದಲ್ಲ, ಬದಲಾಯಿಸತಕ್ಕದ್ದಲ್ಲ, ಅಥವಾ ಆಯುಕ್ತರ ಆದೇಶದ ಮೂಲಕ ಹಾಕಿಸಿದ ಅಥವಾ ಬಣ್ಣದಿಂದ ಬರೆಸಿದ ಹೆಸರನ್ನು ಅಥವಾ ಸಂಖ್ಯೆಯನ್ನು ಅಥವಾ ಉಪ ಸಂಖ್ಯೆಯನ್ನು ಬೇರೆ ರೀತಿಯಲ್ಲಿ ಹಾಕಿಸತಕ್ಕದ್ದಲ್ಲ ಅಥವಾ ಬಣ್ಣದಿಂದ ಬರೆಸತಕ್ಕದ್ದಲ್ಲ.

(2) ಯಾರೇ ವ್ಯಕ್ತಿಯು,–

(i) ನಿಗಮದ ಸಮ್ಮತಿಯಿಲ್ಲದೆ, ಯಾವುದೇ ಭಿತ್ತಿಪತ್ರ, ಬಿಲ್ ಪ್ರಕಟಣೆ ಪತ್ರ, ಅಥವಾ ಇತರ ಪರಿಚಯ ಪತ್ರ ಅಥವಾ ಜಾಹೀರಾತು ಸಾಧನಗಳನ್ನು, ನಾಮಫಲಕಗಳು, ಗೋಡೆ, ಫಲಕಗಳಿಗೆ ಎದುರಾಗಿ ಅಥವಾ ಅವುಗಳ ಮೇಲೆ ಅಂಟಿಸಿದರೆ; ಅಥವಾ

(ii) ಹಿಂದೆ ಹೇಳಲಾದಂತೆ ಸಮ್ಮತಿಯಿಲ್ಲದೆ, ಅಂಥ ಯಾವುದೇ ಕಟ್ಟಡಗಳು, ಗೋಡೆಗಳು, ಫಲಕಗಳು, ಸುತ್ತು ಗೋಡೆಗಳು, ಕಂಬಗಳು, ದೀಪಸ್ತಂಭಗಳು ಅಥವಾ ಅದೇ ರೀತಿಯ ರಚನೆಗಳ ಮೇಲೆ ಸೀಮೆ ಸುಣ್ಣದಿಂದ ಅಥವಾ ಬಣ್ಣದಿಂದ ಅಥವಾ ಇನ್ನಾವುದೇ ರೀತಿಯಲ್ಲಿ ಬರೆದರೆ ವಿರೂಪಗೊಳಿಸಿದರೆ ಅಥವಾ ಗುರುತು ಮಾಡಿದರೆ, ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು ಮತ್ತು ತರುವಾಯದ ಅಪರಾಧಗಳನ್ನು ಕರ್ನಾಟಕ ಬಹಿರಂಗ ಸ್ಥಳಗಳನ್ನು (ವಿರೂಪಗೊಳಿಸುವುದನ್ನು ತಡೆಗಟ್ಟುವ) ಅಧಿನಿಯಮ, 1981ರ (1982ರ ಕರ್ನಾಟಕ ಅಧಿನಿಯಮ 35) ಅಡಿಯಲ್ಲಿ ಅಧಿವಿಚಾರಣೆ ಮಾಡತಕ್ಕದ್ದು.

**ನಮೂನೆ–1**
**(3ನೇ ನಿಯಮ ನೋಡಿ)**

**ನಿಗಮದ ಹೆಸರು:**

| ಸಾರ್ವಜನಿಕ ಸ್ಥಳಗಳ ಪ್ರವರ್ಗ | ವಿವರಗಳು |
|---|---|
| (1) | (2) |
| (1) ಬೀದಿಗಳು | XXX |
| (2) ವೃತ್ತಗಳು | |
| (3) ಚೌಕಗಳು | |
| (4) ಉದ್ಯಾನಗಳು | |
| (5) ಆಟದ ಮೈದಾನಗಳು | |
| (6) ತೋಟಗಳು | |
| (7) ಇತರೆ | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಡಿಸೆಂಬರ್ ೨೨, ೨೦೦೮ (ಪುಷ್ಯ ೧, ಶಕ ವರ್ಷ ೧೯೩೦) | ನಂ. ೧೩೪೭ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಎಫ್‌ಡಿ 8 ಎಸ್‌ಆರ್‌ಎ 2008, ಬೆಂಗಳೂರು, ದಿನಾಂಕ : 18ನೇ ಡಿಸೆಂಬರ್, 2008**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯ ಪತ್ರದಲ್ಲಿ ಈ ಕರಡು ಪ್ರಕಟವಾದ ದಿನಾಂಕದಿಂದ

ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು/ಸಲಹೆಗಳನ್ನು ಆಹ್ವಾನಿಸಿ, ದಿನಾಂಕ : 30ನೇ ಸೆಪ್ಟೆಂಬರ್ 2008ರಂದು ಕರ್ನಾಟಕ ರಾಜ್ಯ ಪತ್ರದ ಭಾಗ-4ಎ ರಲ್ಲಿ ಅಧಿಸೂಚನೆ ಸಂಖ್ಯೆ : ಎಫ್‌ಡಿ 08 ಎಸ್‌ಆರ್‌ಎ 2007, ದಿನಾಂಕ : 18ನೇ ಸೆಪ್ಟೆಂಬರ್ 2008ನ್ನು ಕರ್ನಾಟಕ ನಾಗರೀಕ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾಗುವ 3ನೇ ಪ್ರಕರಣದ (2)ನೇ ಉಪಪ್ರಕರಣದ ಖಂಡ(ಎ)ದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ ;

ಸದರಿ ರಾಜ್ಯ ಪತ್ರದಲ್ಲಿ ದಿನಾಂಕ : 30ನೇ ಸೆಪ್ಟೆಂಬರ್ 2008 ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು/ಸಲಹೆಗಳು ಬಂದಿರುವುದಿಲ್ಲವಾದ್ದರಿಂದ ;

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರ ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ :-

**ನಿಯಮಗಳು**

1. **ಹೆಸರು ಮತ್ತು ಪ್ರಾರಂಭ** :-

(1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (4ನೇ ತಿದ್ದುಪಡಿ) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಅವುಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 95-ಎ ನ್ನು ಬಿಡತಕ್ಕದ್ದು** :-

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 95-ಎ ನ್ನು ದಿ : 17.07.2008 ರಿಂದಲೇ ಕೈಬಿಡಲಾಗಿದೆಯೆಂದು ಭಾವಿಸತಕ್ಕದ್ದು.

ತಿ. ಸಂಖ್ಯೆ : 1262

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು-1)

**Finance Secretariat**

**Notification**

**No. FD 8 SRA 2008, Bangalore, Dated : 18th December, 2008**

Whereas the draft of the following rule further to amend the Karnataka Civil Services Rules was published as required by clause (a) of Sub-section (2) of Section 3 read with section 8 of the Karnataka Civil Services Act, 1978 (Karnataka Act 14 of 1990) in Notification No. FD 08 SRA 2008 dated 18th September 2008 in Part IVA of the Karnataka Gazette dated 30th September 2008 inviting objection and suggestions from all persons likely to be affected thereby within fifteen days from the date of its publication in the Official Gazette.

Whereas the said Gazette was made available to the public on dated 30th September 2008.

And whereas, no objections and suggestions have been received by the State Government.

Now, therefore, in exercise of the powers conferred by sub-section (1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rule, namely :-

**RULES**

**1. Title and commencement :-**

(1) These rules may be called the Karnataka Civil Services (4th amendment) Rules, 2008.

(2) They shall come into force from the date of their publication in the Official Gazette.

**II. Omission of Rule 95-A :-**

In the Karnataka Civil Service Rules, rule 95-A shall be deemed to have been omitted with effect from the date of 17.07.2008.

**C.S. No. 1262**

By order and in the name of the Governor of Karnataka,

**P. NARAYANA**

Under Secretary to Government

Finance Department (Services-1)

ವಿಶೇಷ ಪತ್ರಿಕೆ

| ಭಾಗ – IV | ಬೆಂಗಳೂರು, ಸೋಮವಾರ, ಡಿಸೆಂಬರ್ ೨೨, ೨೦೦೮ (ಪುಷ್ಯ ೧, ಶಕ ವರ್ಷ ೧೯೩೦) | ನಂ. ೧೩೪೮ |
|---|---|---|

**ELECTION COMMISSION OF INDIA**
**Nirvachan Sadan, Ashoka Road, New Delhi-110001.**

**No. 3/4/ID/2008/SDR/(KT), Dated : 17th December, 2008**

**ORDER**

1. Whereas, Section 61 of the Representation of the People Act, 1951 provides that with a view to preventing impersonation of electors, so as to make the right of genuine electors to vote under section 62 of that Act more effective, provisions may be made by rules under that Act for use of Electoral Identity Cards for electors as the means of establishing their identity at the time of polling; and

2. Whereas, Rule 28 of the Registration of Electors Rules, 1960, empowers the Election Commission to direct, with a view to preventing impersonation of electors and facilitating their identification at the time of poll, the issue of Electoral Identity Cards to electors bearing their photographs at State cost; and

3. Whereas, Rules 49H (3) and 49K (2) (b) of the Conduct of Elections Rules, 1961, stipulate that where the electors of a constituency have been supplied with Electoral Identity Cards under the said provisions of Rule 28 of the Registration of Electors Rules, 1960, the electors shall produce their Electoral Identity Cards at the polling station and failure or refusal on their part to produce those Electoral Identity Cards may result in the denial of permission to vote; and

4. Whereas, a combined and harmonious reading of the aforesaid provisions of the said Act and the Rules, makes it clear that although the right to vote arises by the existence of the name in the electoral roll, it is also dependent upon the use of the Electoral Identity Card, where provided by the Election Commission at State cost, and that both are to be used together; and

5. Whereas, the Election Commission made an Order on the 28th August, 1993, directing the issue of Electoral Photo Identity Cards (EPICs) to all electors, according to a time bound programme; and

6. Whereas, the Commission has taken note of the fact that over the last few years since the implementation of the programme of issue of EPICs was taken up, the election machinery of Karnataka, have issued these cards to a substantially high number of electors and made all possible efforts, by way of repeated rounds of the constituencies and areas, with a view to issuing cards to the left-out electors; and

7. Whereas, at the general election to the Legislative Assembly of Haryana held in January – March, 2000, and at all general and bye-elections held since then, the Commission had directed that all electors who were issued with EPICs should produce those cards to exercise their franchise at the said elections, and that it would permit the odd electors who have not obtained their EPICs to vote at the said elections, provided their identity is otherwise established by production of one of the alternative documents prescribed by the Commission; and

8. Now, therefore, after taking into account all relevant factors and the legal and factual position, the Election Commission hereby directs that all electors in 7-Hukkeri, 8-Arbhavi, 56-Devadurga (ST) 77-Kanwar, 130-Turuvekere, 138-Madhugiri, 180-Doddaballapur and 187-Maddur Assembly Constituencies of the current bye- election to the Karnataka Legislative Assembly, notified on 3rd December, 2008, who have been issued with their EPICs, shall have to produce these cards to exercise their franchise, when they come to the polling stations for voting.

9. The Election Commission will, however, permit the electors who have not been issued their EPICs to vote provided their identity is otherwise established by the production of any of the following alternative documents:-

(i) Passports,

(ii) Driving Licences,

(iii) Income Tax Identity ( PAN ) Cards,

(iv) Service Identity Cards with photograph issued to its employees by State/Central Government, Public Sector Undertakings or Public Limited Companies,

(v) Passbooks with photograph issued by Public Sector Banks/Post Office and Kisan Passbooks (Accounts opened on or before 31-10-2008),

(vi) Student Identity Cards with photograph issued by Recognised Educational Institutions on or before 31-10-2008,

(vii) Property Documents with photographs such as pattas, Registered Deeds, etc.,

(viii) Ration Cards with photograph,

(ix) SC/ST/OBC Certificates with photograph issued by competent authority on or before 31-10-2008

(x) Pension Documents with photographs such as ex-servicemen's Pension Book/Pension Payment Order, ex-servicemen's Widow/Dependent Certificates, Old Age Pension Order, Widow Pension Order,

(xi) Freedom Fighter Identity Cards,

(xii) Arms Licenses with photograph issued on or before 31-10-2008,

(xiii) Certificate of Physical Handicap with photograph issued by Competent Authority, on or before 31-10-2008,

(xiv) Ex-servicemen C S D canteen card with photograph,

(xv) Sandhya Suraksha Scheme Card with photograph issued upto 31-10--2008,

(xvi) Job Cards, with photograph issued under NREG Scheme issued upto 31-10-2008,

(xvii) Yashaswini Card with photograph issued upto 31-10-2008,

(xviii) The service identity cards with photographs issued by the local bodies namely Municipal Corporation, CMC, TMC, Village Panchayat etc.,

(xix) Senior Citizens cards bearing photographs of the holder of the card, issued by the Government Department,

(xx) Computer generated temporary ration cards, in original, issued by the Department of Food and Civil Supplies of Government of Karnataka, containing the names and age of the members of the family and indicating their relation to the head of the family.

10. It is clarified that any photo document, as enumerated above, which is available only for a member of the Family, shall be allowed for the purpose of identification of other members of the family, provided all the members come together and are identified to be member of that family through a collateral document, the BPL & APL ration card.

By Order,

**K. F. WILFRED**
SECRETARY

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಮಂಗಳವಾರ, ಡಿಸೆಂಬರ್ ೨೩, ೨೦೦೮ (ಪುಷ್ಯ ೨, ಶಕ ವರ್ಷ ೧೯೩೦ | ನಂ. ೧೩೪೯ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ಸಾರಿಗೆ ಇಲಾಖೆ ಕಛೇರಿಗಳಲ್ಲಿ ಗಣಕೀಕರಣ ಸೇವಾ ಅನುಷ್ಠಾನ - ಸಾರಿಗೆ ಕಲ್ಯಾಣ ಮತ್ತು ರಸ್ತೆ ಸುರಕ್ಷತೆ .. ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂ: ಸಾಲಿಇ 142 ಸಾಇಪ 2007 ದಿನಾಂಕ: 20-11-2007.

2) ದಿನಾಂಕ:17-10-2008 ಕ್ಕೆ ಪತ್ರ ವ್ಯವಹಾರ ಅಂತ್ಯಗೊಂಡ ಸಾರಿಗೆ ಆಯುಕ್ತರ ಪತ್ರ ಸಂಖ್ಯೆ:ಸಿಟಿ/ಎಫ್ ಅಂಡ್ ಬಿ-1/ಪಿಆರ್-105/ 2004-05.

**ಪ್ರಸ್ತಾವನೆ :**

ಸಾರಿಗೆ ಆಯುಕ್ತರು ಸರ್ಕಾರಕ್ಕೆ ಉಲ್ಲೇಖ 2 ರಲ್ಲಿ ಪ್ರಸ್ತಾವನೆ ಸಲ್ಲಿಸಿ, ಕರ್ನಾಟಕ ರಾಜ್ಯದ ಸಾರಿಗೆ ಇಲಾಖೆ ಕಛೇರಿಗಳಲ್ಲಿ ಗಣಕೀಕರಣ ಸೇವಾ ಅನುಷ್ಠಾನಗೊಳಿಸುವಂತೆ ಪ್ರಸ್ಥಾವನೆ ಸಲ್ಲಿಸಿರುತ್ತಾರೆ. ಸಾರಿಗೆ ಇಲಾಖೆಯು ಸಾರಿಗೆ ಮತ್ತು ಸಾರಿಗೇತರ ವಾಹನಗಳ ನೋಂದಣೀ ಹಾಗೂ ಚಾಲನಾ ಅನುಜ್ಞಾ ಪತ್ರ ನೀಡುವುದು ಅಲ್ಲದೆ, ಹೆಚ್ಚಿನ ವ್ಯವಹಾರಣೆಯ ಜೊತೆಗೆ ಅವುಗಳಿಗೆ ಸಂಬಂಧಿಸಿದ ದಾಖಲೆಗಳ ಬೃಹತ್ ಗಾತ್ರದ ಡಾಟಾವನ್ನು ಇಟ್ಟುಕೊಂಡು ಅದರ ನಿರ್ವಹಣೆ ಮತ್ತು ವ್ಯವಹರಣೆ ಮಾಡುತ್ತಿದ್ದು, ಇಲಾಖೆಯು ರಾಜ್ಯದಲ್ಲಿ ಹೆಚ್ಚಿನ ರಾಜಸ್ವ ಸಂಗ್ರಹಣೆಯ ಇಲಾಖೆಗಳಲ್ಲಿ ಒಂದಾಗಿದೆ.

10ನೇ ಮತ್ತು 11ನೇ ಹಣಕಾಸು ಆಯೋಗಗಳ ಅನುದಾನದಡಿಯಲ್ಲಿ ಸಾರಿಗೆ ಆಯುಕ್ತರ ಕಛೇರಿ, ಬೆಂಗಳೂರಿನ 5 ಪ್ರಾದೇಶಿಕ ಸಾರಿಗೆ ಕಛೇರಿಗಳು ಮತ್ತು ಗುಲ್ಬರ್ಗಾ, ಮಂಡ್ಯ, ಮೈಸೂರು, ಮಂಗಳೂರು, ಧಾರವಾಡ, ತುಮಕೂರು, ಬೆಳಗಾವಿ ಮತ್ತು ಚಿತ್ರದುರ್ಗಗಳಲ್ಲಿ ಎಂಟು ಪ್ರಾದೇಶಿಕ ಸಾರಿಗೆ ಕಛೇರಿಗಳನ್ನು ಗಣಕೀಕರಣ ಮಾಡಲಾಗಿದೆ. ರಾಷ್ಟ್ರೀಯ ಸಾರಿಗೆ ಸಾಫ್ಟ್‌ವೇರ್ " "ವಾಹನ"" (ವಾಹನಗಳ ನೋಂದಣಿಗೆ) ಮತ್ತು " "ಸಾರಥಿ"" (ಚಾಲನಾ ಅನುಜ್ಞಾಪತ್ರಗಳಿಗೆ) ಯನ್ನು ಅಳವಡಿಸಿಕೊಳ್ಳಲಾಗುತ್ತಿದೆ.

ರಾಜ್ಯದಲ್ಲಿನ ಎಲ್ಲಾ 55 ಪ್ರಾದೇಶಿಕ/ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳಲ್ಲಿ ಗಣಕೀಕರಣವನ್ನು ಸಂಪೂರ್ಣವಾಗಿ ಜಾರಿಗಳಿಸುವುದಕ್ಕಾಗಿ ಮತ್ತು ಸ್ಮಾರ್ಟ್ ಕಾರ್ಡ್ ಚಾಲನಾ ಪತ್ರ ಮತ್ತು ವಾಹನ ನೋಂದಣಿ ಪತ್ರಗಳನ್ನು ನೀಡುವುದಕ್ಕಾಗಿ 9 ಮೇಲುಸ್ತುವಾರಿ ಕಛೇರಿಗಳು, ಮತ್ತು 15 ತನಿಖಾ ಠಾಣೆಗಳಲ್ಲಿ ಗಣಕೀಕರಣ ಮಾಡಲು ಸಾರ್ವಜನಿಕ ಖಾಸಗಿಯವರ ಸಹಭಾಗಿತ್ವದಲ್ಲಿ "ಕರ್ನಾಟಕ ಸಾರಿಗೆ ಇಲಾಖಾ ಕಛೇರಿಗಳಲ್ಲಿ ಕಂಪ್ಯೂಟರೈಸ್ಡ್ ಸರ್ವೀಸ್ ಡೆಲಿವರಿ ಸಿಸ್ಟಂ"" ಎಂಬ ಶೀರ್ಷಿಕೆಯಡಿಯಲ್ಲಿ ಒಂದು ಯೋಜನೆಯನ್ನು ಸಿದ್ದಪಡಿಸಲಾಗಿದೆ. ಇ-ಗೌರ್ನನ್ಸೆ ಯೋಜನೆಗಳನ್ನು ಜಾರಿಗೊಳಿಸಲು ಮುಖ್ಯ ಕಾರ್ಯದರ್ಶಿಯವರ ನೇತೃತ್ವದಲ್ಲಿ ದಿನಾಂಕ: 29-6-2007 ರಂದು ನಡೆದ ಅಧಿಕಾರಿಯುಕ್ತ ಸಮಿತಿ ಸಭೆಯಲ್ಲಿ ಕಂಪ್ಯೂಟರೈಸ್ಡ್ ಸರ್ವೀಸ್ ಡೆಲಿವರಿ ಸಿಸ್ಟಂ ಹಾಗೂ ಸ್ಮಾರ್ಟ್ ಕಾರ್ಡ್ ಚಾಲನಾ ಪತ್ರ ಮತ್ತು ನೋಂದಣಿ ಪತ್ರಗಳನ್ನು ನೀಡುವ ಬಗ್ಗೆ ಸಾರ್ವಜನಿಕ-ಖಾಸಗಿಯವರ ಸಹಭಾಗಿತ್ವದೊಂದಿಗೆ ಅನುಷ್ಟಾನಗೊಳಿಸುವ ಸಾರಿಗೆ ಇಲಾಖೆಯ ಪ್ರಸ್ತಾವನೆಯನ್ನು ಅನುಮೋದಿಸಿರುತ್ತದೆ. ಇದರಿಂದ ಆಗುವ ಉಪಯೋಗಗಳು.

(i) ದಕ್ಷತೆಯಿಂದ ಶೀಘ್ರವಾಗಿ ಉತ್ತಮ ಗುಣಮಟ್ಟದ ಮತ್ತು ಪಾರದರ್ಶಕತೆಯ ಸೇವೆಯನ್ನು ಸಾರ್ವಜನಿಕರಿಗೆ ಸಾರಿಗೆ ಇಲಾಖೆ ಒದಗಿಸಲು ಈ ಯೋಜನೆಯಿಂದ ಆಗುತ್ತದೆ. ಕಾಲಮಿತಿಯಲ್ಲಿ ಅನುಜ್ಞಾ ಪತ್ರಗಳನ್ನು ಮತ್ತು ನೋಂದಣಿ ಪ್ರಮಾಣ ಪತ್ರಗಳನ್ನು ವಿತರಿಸಲು ಸಹಾಯಕವಾಗುತ್ತದೆ. ಕಂಪ್ಯೂಟರೀಕರಣದಿಂದ 1800 ಕೋಟಿ ರೂಗಳಿಗೂ ಹೆಚ್ಚಿನ ರಾಜಸ್ವ ವಸೂಲಾತಿಯನ್ನು ಲೆಕ್ಕವಿಡಲು ಮತ್ತು ರಾಜಸ್ವ ಸೋರಿಕೆಯನ್ನು ತಡೆಯಲು ಅನುಕೂಲವಾಗುತ್ತದೆ. ನಂಬಲರ್ಹ ಮಾಹಿತಿ ನಿರ್ವಹಣೆ ವ್ಯವಸ್ಥೆ (Reliable Management Information System) ಗಾಗಿ ರಾಜ್ಯದಲ್ಲಿ ಎಲ್ಲಾ ವಾಹನಗಳ ಮತ್ತು ಚಾಲನಾ ಅನುಜ್ಞಾಪತ್ರಗಳ ಮಾಹಿತಿ ಶೇಖರಿಸಿ ಡಾಟಾ ಬೇಸ್ (data base) ಅನ್ನು ತಯಾರಿಸಲು ನೆರವಾಗುವುದು. ಸಂಬಂಧಿಸಿದ ಅಪರಾಧಗಳನ್ನು ಪತ್ತೆ ಹಚ್ಚುವ ಕಾರ್ಯ ಮತ್ತು ಉತ್ತಮ ಸಂಚಾರದ ನಿರ್ವಹಣೆಗಾಗಿ ವಾಹನಗಳ ಮಾಹಿತಿಯನ್ನು ಪೋಲೀಸ್ ಇಲಾಖೆಯವರಿಗೆ ನೀಡಲು ಸಹ ಅನುವಾಗುತ್ತದೆ.

(ii) ಸಾರಿಗೆ ಇಲಾಖೆ ಉತ್ತಮ ತಪಾಸಣಾ ಚಟುವಟಿಕೆಗಳನ್ನು ಸಾಧಿಸಬಹುದು. ಕಲಿಕಾ ಹಾಗೂ ಚಾಲನಾ ಅನುಜ್ಞಾ ಪತ್ರಗಳಿಗೆ ಬರುವ ಅಭ್ಯರ್ಥಿಗಳನ್ನು ವ್ಯವಸ್ಥಿತ ಹಾಗೂ ಪಾರದರ್ಶಕವಾಗಿ ಪೂರ್ವಭಾವಿ ಪರೀಕ್ಷೆಗೆ ಒಳಪಡಿಸಲು ಎಲ್ಲಾ

ಪ್ರಾದೇಶಿಕ/ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳಲ್ಲಿ ಗಣಕೀಕರಣ ಮೂಲಕ ಕಲಿಕಾ ಅನುಜ್ಞಾಪತ್ರಗಳಿಗೆ ಪರೀಕ್ಷೆ ನಡೆಸಲು ಸದರಿ ಯೋಜನೆಯಲ್ಲಿ ಉದ್ದೇಶಿಸಿದೆ. ಪ್ರಾದೇಶಿಕ ಸಾರಿಗೆ ಕಛೇರಿಗಳ ಅಧಿಕಾರ ವ್ಯಾಪ್ತಿ ಏನೇ ಇದ್ದರೂ, ಸಾರ್ವಜನಿಕರಿಗೆ ಕೆಲವೊಂದು ಸೇವೆ ಒದಗಿಸಲು ಮತ್ತು ಪ್ರಾದೇಶಿಕ ಸಾರಿಗೆ ಅದಧಿಕಾರಿಗಳು ರಾಜ್ಯದ ಬೇರೇ ಕಛೇರಿಗಳ ದಾಖಲೆಗಳನ್ನು ನೋಡಲು ಪ್ರಾದೇಶಿಕ/ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳನ್ನು ಕರ್ನಾಟಕ ರಾಜ್ಯದಾದ್ಯಂತ ಒಂದೇ ನೆಟ್‌ವರ್ಕ್‌ನಲ್ಲಿ (Wide Area Network) ತರಲು ಉದ್ದೇಶಿಸಲಾಗಿದೆ.

ಸ್ಮಾರ್ಟ್ ಕಾರ್ಡ್ ಚಾಲನಾ ಅನುಜ್ಞಾಪತ್ರ ಮತ್ತು ವಾಹನ ನೋಂದಣಿ ಪ್ರಮಾಣ ಪತ್ರವು ಸ್ಮಾರ್ಟ್ ಕಾರ್ಡ್ ಪ್ಲಾಸ್ಟಿಕ್‌ನದಾಗಿದ್ದು, ಮೆಮೋರಿ ಚಿಪ್‌ನ್ನು ಹೊಂದಿರುತ್ತದೆ. ಇದರಲ್ಲಿ ಚಾಲನಾ ಅನುಜ್ಞಾಪತ್ರದ ವಿವರಗಳನ್ನು ಮುದ್ರಿಸುವ ನಮೂನೆಯನ್ನು ಕೇಂದ್ರ ಮೋಟಾರು ವಾಹನ ನಿಯಮಗಳು, 1989 ರ ನಿಯಮ 16(2) ಮತ್ತು ನೋಂದಣಿ ಪ್ರಮಾಣ ಪತ್ರದ ನಮೂನೆಯನ್ನು ನಿಯಮ 48 ರಲ್ಲಿ ನಿಗದಿಪಡಿಸಲಾಗಿರುತ್ತದೆ. ಎನ್.ಐ.ಸಿ. (National Informations Center) ಯವರು ಗೊತ್ತುಪಡಿಸಿರುವ ರಕ್ಷಣಾ ಕೀಲಿಯನ್ನು ಉಪಯೋಗಿಸಿ ಅಧಿಕೃತ ಅಧಿಕಾರಿ ಮಾತ್ರ ಕಂಪ್ಯೂಟರೀಕೃತ ಚಿಪ್‌ನಲ್ಲಿನ ವಿವರಗಳನ್ನು update ಮಾಡಲು ಸಾಧ್ಯವಾಗುತ್ತದೆ. ಸ್ಮಾರ್ಟ್ ಕಾರ್ಡ್‌ನ್ನು ಅನಧಿಕೃತವಾಗಿ ಹಸ್ತಕ್ಷೇಪ ಮಾಡಲು ಆಗುವುದಿಲ್ಲ (tamper proof) ಹಾಗೂ ದೀರ್ಘಕಾಲ ಬಾಳಿಕೆ ಬರುತ್ತದೆ.

**ಈ ಯೋಜನೆಯ ಉದ್ದೇಶ- ಖಾಸಗಿಯವರು ನೀಡುವ ಸೇವೆಗಳು**;-

(i) ಈ ಯೋಜನೆಯಡಿಯಲ್ಲಿ ಟೆಂಡರ್‌ನಲ್ಲಿ ನಮೂದಿಸಿದಂತೆ ಕಂಪ್ಯೂಟರ್ ಹಾರ್ಡ್‌ವೇರ್, ಸಾಫ್ಟ್‌ವೇರ್, ಯು.ಪಿ.ಎಸ್. ನೆಟ್‌ವರ್ಕಿಂಗ್ ಮತ್ತು ಅವುಗಳಿಗೆ ಸಂಬಂಧಿಸಿದ ಇತರೆ ಪರಿಕರಗಳನ್ನು ಅಲ್ಲದೆ ಸ್ಮಾರ್ಟ್ ಕಾರ್ಡ್‌ಗಳನ್ನು ಸರಬರಾಜು, ತಯಾರಿಸಿ ಮತ್ತು ವಿತರಣೆಯನ್ನು ಮಾಡುವುದಕ್ಕಾಗಿ ಅಗತ್ಯವಿರುವ ಸರ್ವರ್ ಕೊಠಡಿ, ವಿದ್ಯುತ್ ಪರಿಕರಗಳ ಜೋಡಣೆ, ಜನರೇಟರ್, ಪೀಠೋಪಕರಣ ಇತ್ಯಾದಿಗಳನ್ನು ಸಹ ಖಾಸಗಿಯವರು ಸ್ಥಾಪಿಸುತ್ತಾರೆ.

(ii) ಒಪ್ಪಂದದ ಅವಧಿಯಲ್ಲಿ ಇತರೆ ಸಂಬಂಧಿತ ಕೆಲಸಗಳಾದ ಈಗಾಗಲೇ ಇರುವ ವಾಹನಗಳ ನೋಂದಣಿ ಮತ್ತು ಚಾಲನಾ ಅನುಜ್ಞಾಪತ್ರಗಳ ದಾಖಲೆಗಳ ಬ್ಯಾಕ್‌ಲಾಗ್ ಮಾಹಿತಿಯನ್ನು ನಮೂದು ಮಾಡುವುದು, ಮುಂದುವರಿಯುತ್ತಿರುವ ಎಲ್ಲಾ ಮಾಹಿತಿಯ ಡಾಟಾ ನಮೂದು ಮಾಡುವುದು, ಎಲ್ಲಾ ಕಛೇರಿಗಳಲ್ಲಿ ತಾಂತ್ರಿಕ ಸಲಹೆಗಾರರವರನ್ನು ನೇಮಿಸುವುದು, ಸಾರಿಗೆ ಇಲಾಖೆಯ ಸಿಬ್ಬಂದಿಗೆ ತರಬೇತಿ ನೀಡುವುದು ಮತ್ತು ಆಗಿಂದಾಗ್ಗೆ ಉಪಯೋಗಿಸುವ ಸಲಕರಣೆಗಳನ್ನು ಸರಬರಾಜು ಮಾಡುವ ಮತ್ತು ತರಬೇತಿ ನೀಡುವ ಜವಾಬ್ದಾರಿಯನ್ನು ಖಾಸಗಿಯವರು ಹೊಂದಿರುತ್ತಾರೆ. ಒಪ್ಪಂದದ ಅವಧಿಯಲ್ಲಿ ರಾಜ್ಯದ ಎಲ್ಲಾ ಸಾರಿಗೆ ಕಛೇರಿಗಳಲ್ಲಿ ಸಂಪೂರ್ಣ ಗಣಕೀಕರಣ ಮತ್ತು ಸ್ಮಾರ್ಟ್ ಕಾರ್ಡ್ ನೀಡುವಿಕೆಯನ್ನು ಮಾಡಲು ಕಂಪ್ಯೂಟರ್‌ಗಳ ನಿರ್ವಹಣೆ, (ಗಣಕೀಕರಣಗೊಂಡಿರುವ 13 ಕಛೇರಿಗಳಲ್ಲಿನ ಕಂಪ್ಯೂಟರ್‌ಗಳ ಬದಲಾವಣೆ ಮತ್ತು ನಿರ್ವಹಣೆ ಸೇರಿದಂತೆ) ಯೋಜನೆಯ ಅಗತ್ಯತೆಗಳು ಮತ್ತಿನ್ನಿತರ ಸಂಬಂಧಿತ ಸೇವೆಗಳನ್ನು ಟೆಂಡರ್‌ನಲ್ಲಿ ನಮೂದಿಸಿರುವಂತೆ ಖಾಸಗೀಯವರು ನೀಡುತ್ತಾರೆ.

**ಯೋಜನೆಯ ಪ್ರಧಾನ ವೈಶಿಷ್ಟ್ಯಗಳು**.

(i) ಈ ಯೋಜನೆಯು ಸಾರ್ವಜನಿಕ- ಖಾಸಗಿಯವರ ಸಹಭಾಗಿತ್ವದಲ್ಲಿ ಇರುವುದರಿಂದ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಇರುವುದಿಲ್ಲ.

(ii) ಯೋಜನೆಯನ್ನು ಒಂದು ಒಪ್ಪಂದ ಮಾಡಿಕೊಂಡು ಜಾರಿಗೊಳಿಸಲಾಗುವುದು. ಈ ಒಪ್ಪಂದದ ಅವಧಿಯು ಒಪ್ಪಂದ ಸಹಿ ಮಾಡಿದ ದಿನಾಂಕದಿಂದ 15 ವರ್ಷಗಳು ಅಥವಾ ಒಂದು ಕೋಟಿ ಸ್ಮಾರ್ಟ್ ಕಾರ್ಡ್ ಚಾಲನಾ ಅನುಜ್ಞಾಪತ್ರಗಳು ಮತ್ತು ಒಂದು ಕೋಟಿ ನೋಂದಣಿ ಪ್ರಯಾಣ ಪತ್ರಗಳನ್ನು ನೀಡುವಿಕೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇರುತ್ತದೆ. ಒಪ್ಪಂದದಲ್ಲಿ ತಿಳಿಸಿರುವ ಸೇವೆಗಳನ್ನು ನೀಡಲು ವಿಳಂಬ ಮಾಡಿದಲ್ಲಿ ಖಾಸಗಿಯವರು ದಂಡ ಪಾವತಿಗೆ ಒಳಪಡುತ್ತಾರೆ.

(iii) ಈ ಯೋಜನೆಯನ್ನು ಸಂಪೂರ್ಣವಾಗಿ ಜಾರಿಗೊಳಿಸುವುದನ್ನು ಮೇಲ್ವಿಚಾರಣೆ ಮಾಡಲು ಸಾರಿಗೆ ಆಯುಕ್ತರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಗುವುದು. ಖಾಸಗಿ ಕಂಪನಿಯ ಪ್ರತಿನಿಧಿಗಳು, ನ್ಯಾಷನಲ್ ಇನ್‌ಫರ್ಮಾಟಿಕ್ ಸೆಂಟರ್, ಇ-ಗೌರ್‍ನನೆನ್ಸ್, ಸಚಿವಾಲಯ, ಯೋಜನೆಯ ಉಸ್ತುವಾರಿ ಘಟಕ ಇವರುಗಳು ಪುನರಾವಲೋಕನ ಸಮಿತಿಯ ಸದಸ್ಯರಾಗಿರುತ್ತಾರೆ. ಇದೇ ರೀತಿಯಲ್ಲಿ ಯೋಜನೆಯ ದಿನನಿತ್ಯ ಅನುಷ್ಠಾನ ಮತ್ತು ಉಸ್ತುವಾರಿವನ್ನು ನೋಡಿಕೊಳ್ಳಲು ಉಪ

ಸಾರಿಗೆ ಆಯುಕ್ತರವರ ನೇತೃತ್ವದಲ್ಲಿ ನ್ಯಾಷನಲ್ ಇನ್‌ಫರ್ಮ್ಯಾಟಿಕ್ ಸೆಂಟರ್, ಖಾಸಗಿ ಕಂಪನಿಯ ಪ್ರತಿನಿಧಿಗಳು, ತಾಂತ್ರಿಕ ಸಲಹೆಗಾರರು ಮತ್ತು ಪೂರಕ ಸಿಬ್ಬಂದಿಯನ್ನೊಳಗೊಂಡಂತೆ ಯೋಜನಾ ಉಸ್ತುವಾರಿ ಸಮಿತಿಯನ್ನು ಸಹ ರಚಿಸಲಾಗುವುದು.

(iv) ಟೆಂಡರ್‌ನಲ್ಲಿ ನಿಗದಿಗೊಳಿಸುವ ಸ್ಥಾಪನೆ ಘಟ್ಟದಲ್ಲಿ ಒಪ್ಪಂದಕ್ಕೆ ಸಹಿ ಮಾಡಿದ ದಿನಾಂಕದಿಂದ ಆರು ತಿಂಗಳ ಅವಧಿಯ ಒಳಗೆ ಕಂಪ್ಯೂಟರ್ ಹಾರ್ಡ್‌ವೇರ್ ಸಾಫ್ಟ್‌ವೇರ್ ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲಾ ಪರಿಕರಗಳನ್ನು ಸ್ಥಾಪಿಸಬೇಕಾಗುತ್ತದೆ. ಅವುಗಳ ಕಾರ್ಯ ಮತ್ತು ನಿರ್ವಹಣೆಯು ಒಪ್ಪಂದದ ಅವಧಿಯವರೆವಿಗೂ ಚಾಲ್ತಿಯಲ್ಲಿರುತ್ತದೆ.

(v) ಇಲಾಖೆಯ ಎಲ್ಲಾ ಕಛೇರಿಗಳಲ್ಲಿ "ವಾಹನ್" (ವಾಹನಗಳ ನೋಂದಣಿಗೆ) ಮತ್ತು "ಸಾರಥಿ" (ಚಾಲನಾ ಅನುಜ್ಞಾಪತ್ರ) ಇವುಗಳ ಸಾಫ್ಟ್‌ವೇರ್ ಬಳಕೆ ಮಾಡಲಾಗುವುದು. ಕೇಂದ್ರ ಸರ್ಕಾರದ ರಸ್ತೆ ಸಾರಿಗೆ ಮತ್ತು ರಾಷ್ಟ್ರೀಯ ಹೆದ್ದಾರಿಗಳ ಸಚಿವಾಲಯದ ಸಲಹೆಯೊಂದಿಗೆ ನ್ಯಾಷನಲ್ ಇನ್‌ಫರ್ಮ್ಯಾಟಿಕ್ ಸೆಂಟರ್, ದೆಹಲಿ ಇವರು ಈ ಸಾಫ್ಟ್‌ವೇರ್‌ನ್ನು ಅಭಿವೃದ್ಧಿಗೊಳಿಸಿದ್ದಾರೆ, ಮತ್ತು ಉಚಿತವಾಗಿ ಅಳವಡಿಸಿ ನಿರ್ವಹಿಸುತ್ತಾರೆ. ಇದು ರಾಷ್ಟ್ರೀಯ ಸಾರಿಗೆ ಸಾಫ್ಟ್‌ವೇರ್ ಆಗಿರುತ್ತದೆ. ಇದು ಕೆಲಸದ ಕ್ರಮವನ್ನು (work flow) ಹೊಂದಿದೆ. ವಾಹನಗಳ ನೋಂದಣಿ, ಶುಲ್ಕ/ತೆರಿಗೆ ವಸೂಲಾತಿ, ಚಾಲನಾ ಅನುಜ್ಞಾಪತ್ರ, ರಹದಾರಿ ಮತ್ತಿತರೆ ವ್ಯವಹರಣೆಯನ್ನು ಈ ಸಾಫ್ಟ್‌ವೇರ್‌ನಲ್ಲಿ ನಿರ್ವಹಿಸಬಹುದಾಗಿದೆ. ಸದರಿ ಸಾಫ್ಟ್‌ವೇರ್‌ನ್ನು ಎಲ್ಲಾ ರಾಜ್ಯಗಳಲ್ಲಿನ ಸಾರಿಗೆ ಇಲಾಖೆಗಳಲ್ಲಿ ಬಳಸಲಾಗುತ್ತಿದೆ. ಈ ಸಾಫ್ಟ್‌ವೇರ್‌ನ್ನು ಬಳಸಿ ಸಾರಿಗೆ ಇಲಾಖೆಯ ಸಿಬ್ಬಂದಿಯು ಪ್ರಾದೇಶಿಕ ಸಾರಿಗೆ ಕಛೇರಿಯ ಸದರಿ ವ್ಯವಹರಣೆಗಳನ್ನು ಪೂರ್ಣಗೊಳಿಸಿ ಅದರ ಅಂತಿಮ ಡಾಟಾವನ್ನು ಸ್ಮಾರ್ಟ್ ಕಾರ್ಡ್‌ಗಳಲ್ಲಿ ಮುದ್ರಿಸಲು ಖಾಸಗಿಯವರಿಗೆ ನೀಡಲಾಗುವುದು. ಮಾಹಿತಿಯ ನಮೂದನ್ನು ಅಪ್‌ಡೇಟ್ ಮಾಡಲು ಸಾರಿಗೆ ಇಲಾಖೆಯ ಅಧಿಕೃತ ಅಧಿಕಾರಿಯು ಸುರಕ್ಷಿತ ಸಂಖ್ಯಾ ವ್ಯವಸ್ಥೆ (Security Key Management System) ಬಳಸುವ ಮೂಲಕ ಮಾತ್ರ ಸಾಧ್ಯವಾಗುತ್ತದೆ ಹಾಗೂ ಅದನ್ನು ಅನಧಿಕೃತವಾಗಿ ಹಸ್ತಕ್ಷೇಪ ಮಾಡಲು ಆಗುವುದಿಲ್ಲ (tamper proof)

(vi) ರಾಜ್ಯದ ಎಲ್ಲಾ ಚಾಲನಾ ಅನುಜ್ಞಾಪತ್ರಗಳು ಮತ್ತು ನೋಂದಣಿ ಪ್ರಮಾಣ ಪತ್ರಗಳ ಒಂದು ಡಾಟಾ ಬೇಸ್‌ನ್ನು ರಚಿಸಿ ಅದನ್ನು ರಾಷ್ಟ್ರೀಯ ಸಾರಿಗೆ ಡಾಟಾ ಬೇಸ್‌ಗೆ ಜೋಡಣೆ ಮಾಡಲು ಈ ಯೋಜನೆ ಸಹಕಾರಿಯಾಗುತ್ತದೆ.

(vii) ಸ್ಮಾರ್ಟ್ ಕಾರ್ಡ್ ಚಾಲನಾ ಅನುಜ್ಞಾ ಪತ್ರ ಹೊಂದಿರುವವರು ರಸ್ತೆ ಅಪಘಾತದಲ್ಲಿ ಸಾವಿಗೀಡಾದಲ್ಲಿ 1.00 ಲಕ್ಷ ರೂ.ಗಳು ಮತ್ತು ಶಾಶ್ವತ ಸಂಪೂರ್ಣ ಅಂಗವಿಕಲತೆಯಾದಲ್ಲಿ 50 ಸಾವಿರ ರೂಗಳ ವಿಮೆ ಮಾಡಿಸುವ ಜವಾಬ್ದಾರಿಯನ್ನು ಸಹ ಈ ಯೋಜನೆಯನ್ನು ಜಾರಿಗೊಳಿಸುವ ಖಾಸಗಿಯವರು ಹೊಂದಿರುತ್ತಾರೆ.

**ಟೆಂಡರ್ ಪ್ರಕ್ರಿಯೆ**:

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮದ ಪ್ರಕಾರ ಅರ್ಹ ಖಾಸಗಿಯವರನ್ನು ಆಯ್ಕೆ ಮಾಡಲು ಟೆಂಡರ್ ಸಾರಿಗೆ ಆಯುಕ್ತರವರು ಕರೆದಿರುತ್ತಾರೆ. ಸರ್ಕಾರವು ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 20-11-2007 ರಲ್ಲಿ ಸಾರಿಗೆ ಆಯುಕ್ತರನ್ನು ಟಂಡರ್ ಆಹ್ವಾನಿಸುವ ಪ್ರಾಧಿಕಾರ ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಎಂದು ನೇಮಿಸಲಾಗಿದ್ದು, ಟೆಂಡರ್ ಪ್ರಕ್ರಿಯೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮದ ಪ್ರಕಾರ ದಿನಾಂಕ: 31-3-2008 ರಂದು ಸಾರಿಗೆ ಆಯುಕ್ತರು ಪೂರ್ಣಗೊಳಿಸಿರುತ್ತಾರೆ. 11 ಪ್ರಮುಖ ಕಂಪನಿಗಳು ಟೆಂಡರ್‌ನಲ್ಲಿ ಭಾಗವಹಿಸಿದ್ದವೆಂದು ಮತ್ತು ಬೆಲೆ ತುಲನಾತ್ಮಕ ಪಟ್ಟಿಯಂತೆ M/s Rosmerta Technologies Pvt.Ltd. and Consortium ಇವರು ಅತ್ಯಂತ ಕಡಿಮೆ ಬಿಡ್ಡರ್ ಆಗಿದ್ದು ಅವರು ಸ್ಮಾರ್ಟ್ ಕಾರ್ಡ್ ಚಾಲನಾ ಅನುಜ್ಞಾ ಪತ್ರ ನೀಡಲು ರೂ. 49-00 ಗಳು(ರೂ. ನಲವತ್ತ ಒಂಭತ್ತು ಮಾತ್ರ) ಮತ್ತು ಸ್ಮಾರ್ಟ್ ಕಾರ್ಡ್ ನೋಂದಣಿ ಪ್ರಮಾಣ ಪತ್ರ ನೀಡಲು ರೂ. 63-00 (ರೂ. ಅರವತ್ತ ಮೂರು) ಗಳನ್ನು ನಮೂದಿಸಿರುತ್ತಾರೆಂದು ಸಾರಿಗೆ ಆಯುಕ್ತರು ತಿಳಿಸಿರುತ್ತಾರೆ.

**ಕೇಂದ್ರ ಮೋಟಾರು ವಾಹನ ನಿಯಮಗಳು 1989 ರಲ್ಲಿನ ಅವಕಾಶಗಳು**:

ಕೇಂದ್ರ ಮೋಟಾರು ವಾಹನ ನಿಯಮಗಳು, 1989ರ ನಿಯಮ 32 ರಂತೆ,-

i) ಚಾಲನ ಅನುಜ್ಞಾಪತ್ರವನ್ನು ಗಣಕೀಕೃತ ಚಿಪ್ ಹೊಂದಿದ್ದಲ್ಲಿ : 200-00 ರೂಗಳು ಒಂದಕ್ಕೆ ಹಾಗೂ

ii) ಸ್ಮಾರ್ಟ್ ಕಾರ್ಡ್ ರೂಪದಲ್ಲಿ ನೀಡಲು ಚಾಲನ ಅನುಜ್ಞಾಪತ್ರ ನವೀಕರಣ : 250-00 ರೂಗಳು ಒಂದಕ್ಕೆ

ಮತ್ತು

| | |
|---|---|
| ಸದರಿ ನಿಯಮಗಳ ನಿಯಮ 81 ರಂತೆ,-<br>ವಾಹನ ನೋಂದಣಿ ಪ್ರಮಾಣ ಪತ್ರವನ್ನು ಸ್ಮಾರ್ಟ್<br>ಕಾರ್ಡ್ ರೂಪದಲ್ಲಿ ನೀಡಲು | ೨೦೦/-ರೂಗಳು ಒಂದಕ್ಕೆ<br>ಹೆಚ್ಚುವರಿಶುಲ್ಕವಾಗಿ ಪಡೆಯಲು<br>ಅವಕಾಶವಿರುತ್ತದೆ. |

ಸದರಿ ನಿಯಮಗಳಲ್ಲಿ ನಿಗದಿಗೊಳಿಸಿರುವ ಶುಲ್ಕದ ಮೊತ್ತವನ್ನು ಸಾರಿಗೆ ಇಲಾಖೆ ಪಡೆಯಬೇಕಾಗಿದ್ದು, ಸೇವೆ ಒದಗಿಸುವರಿಗೆ ಅವರು ತಿಳಿಸಿರುವ ಮೊತ್ತವನ್ನು ಪಾವತಿಸಿ ನಂತರ ಹಣ ಉಳಿಕೆ ಯಾಗುವುದು.

**ವಿವರಗಳು:**

| | | **ನಿಯಮಗಳಲ್ಲಿ ನಿಗದಿಗೊಳಿಸಿರುವ ಶುಲ್ಕ** | **ಸೇವೆಗಳನ್ನು ಒದಗಿಸುವವರಿಗೆ ನೀಡುವ ಮೊತ್ತ** | **ಉಳಿಯುವ ಮೊತ್ತ** |
|---|---|---|---|---|
| i. | ಸ್ಮಾರ್ಟ್‌ಕಾರ್ಡ್ ಚಾಲನಾ ಅನುಜ್ಞಾ ಪತ್ರ ನೀಡುವಿಕೆ. | ರೂ.200-00 ಒಂದಕ್ಕೆ | ರೂ. 49-00 ಒಂದಕ್ಕೆ | ರೂ. 151-00 ಒಂದಕ್ಕೆ |
| ii. | ಸ್ಮಾರ್ಟ್‌ಕಾರ್ಡ್ ಚಾಲನಾ ಅನುಜ್ಞಾಪತ್ರ ನವೀಕರಣ | ರೂ 250-00 ಒಂದಕ್ಕೆ | ರೂ. 49-00 ಒಂದಕ್ಕೆ | ರೂ. 201-00 ಒಂದಕ್ಕೆ |
| iii | ಸ್ಮಾರ್ಟ್‌ಕಾರ್ಡ್ ನೋಂದಣಿ ಪ್ರಮಾಣ ಪತ್ರ | ನಿಯಮ 81 ರಡಿಯಲ್ಲಿ ನಿಗದಿಗೊಳಿಸಿದಂತೆ ಈಗಿರುವ ಶುಲ್ಕಕ್ಕೆ ಅಧಿಕ ವಾಗಿ ರೂ. 200-00 ಒಂದಕ್ಕೆ. | ರೂ. 63-00 ಒಂದಕ್ಕೆ | ರೂ.137-00 ಒಂದಕ್ಕೆ |

ಸಾರಿಗೆ ಕ್ಷೇಮಾಭಿವೃದ್ಧಿ ಮತ್ತು ರಸ್ತೆ ಸುರಕ್ಷತೆ ನಿಧಿ (Transport Welfare & Road Safety Fund) ಗೆ ಹೆಚ್ಚಿನ ಉಳಿಕೆ ಮೊತ್ತವನ್ನು ಸದರಿ ನಿಧಿಗೆ ಸೇರಿಸಿ, ಸಾರಿಗೆ ಕ್ಷೇಮಾಭಿವೃದ್ಧಿ ಮತ್ತು ರಸ್ತೆ ಸುರಕ್ಷತಾ ಚಟುವಟಿಕೆಗಳ ಮೂಲಕ, ಸಾರ್ವಜನಿಕರ ಹಿತಕ್ಕಾಗಿ ಬಳಸಿಕೊಳ್ಳಲು ಮಾನ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ನೇತೃತ್ವ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರ ಸಹ-ಅಧ್ಯಕ್ಷತೆಯಲ್ಲಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಸಾರಿಗೆ ಇಲಾಖೆ, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಒಳಾಡಳಿತ ಇಲಾಖೆ ಇವರುಗಳು ಸದಸ್ಯರಾಗಿದ್ದು, ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ ಇವರು ಸದಸ್ಯಕಾರ್ಯದರ್ಶಿಗಳಾಗಿರುವ ರಾಜ್ಯ ಮಟ್ಟದ ಸಾರಿಗೆ ಕ್ಷೇಮಾಭಿವೃದ್ಧಿ ಮತ್ತು ರಸ್ತೆ ಸುರಕ್ಷತೆ ಸಮಿತಿಯನ್ನು ರಚಿಸುವುದು. ಸದರಿ ಸಮಿತಿಯು ಕಾರ್ಯಕ್ರಮದ ರೂಪು ರೇಷೆ, ಅನುಷ್ಠಾನ ಮತ್ತು ಮೇಲುಸ್ತುವಾರಿಯನ್ನು ಮಾಡಲು ಸಮಿತಿಯನ್ನು ರಚಿಸುವುದು. ಈ ರೀತಿ ಉಳಿಕೆಯ ಮೊತ್ತವನ್ನು ಬಳಸಿಕೊಳ್ಳಲು, ಸಾರಿಗೆ ಆಯುಕ್ತರು ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಾರಿಇ 142 ಸಾಇಪ 2007 ಬೆಂಗಳೂರು**
**ದಿನಾಂಕ: 10-12-2008 (ಯೂನಿಕ್ ಸಂ. 118/2008)**

**ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಅಂಶಗಳಿಗೆ ಮಂಜೂರಾತಿಯನ್ನು ನೀಡಲಾಗಿದೆ:-**

(1)(i) ಕರ್ನಾಟಕ ರಾಜ್ಯದ ಎಲ್ಲಾ ಸಾರಿಗೆ ಕಛೇರಿಗಳಲ್ಲಿ ಗಣಕೀಕರಣ ಸೇವಾ ವ್ಯವಸ್ಥೆ ಯೋಜನೆಯನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ ಜಾರಿಗೊಳಿಸಲು ಮತ್ತು ಟೆಂಡರಿನಲ್ಲಿ ನಮೂದಿಸಿ ಸಾರಿಗೆ ಆಯುಕ್ತರು ಒಪ್ಪಿರುವ ಶುಲ್ಕವನ್ನು ಖಾಸಗಿ ಸೇವದಾರರು ವಸೂಲಿ ಮಾಡಿ ಚಾಲನಾ ಅನುಜ್ಞಾಪತ್ರದ ಸ್ಮಾರ್ಟ್ ಕಾರ್ಡ್ ಹಾಗೂ ವಾಹನ ನೋಂದಣಾ ಪತ್ರಗಳ ಸ್ಮಾರ್ಟ್ ಕಾರ್ಡ್‌ಗಳನ್ನು ನೀಡಲು ಮತ್ತು ಕೇಂದ್ರ ಮೋಟಾರು ವಾಹನ ನಿಯಮಗಳಲ್ಲಿ ನಿಗದಿಗೊಳಿಸಿರುವಂತೆ ನಿಗದಿತ ಶುಲ್ಕದ ಉಳಿಕೆ ಮೊತ್ತವನ್ನು ಸಾರಿಗೆ ಇಲಾಖೆ ಸಂಗ್ರಹಿಸಿ ರಾಜ್ಯದ ಕ್ರೋಢೀಕೃತ ನಿಧಿಗೆ ಜಮಾ ಮಾಡತಕ್ಕದ್ದು.

(ii) ಕಂಪ್ಯೂಟರ್ ಹಾರ್ಡ್‌ವೇರ್, ಸಾಫ್ಟ್‌ವೇರ್, ಯು.ಪಿ.ಎಸ್. ಮತ್ತು ಅವುಗಳಿಗೆ ಸಂಬಂಧಿಸಿದ ಇತರೆ ಪರಿಕರಗಳನ್ನು ಅಲ್ಲದೆ ಸ್ಮಾರ್ಟ್ ಕಾರ್ಡ್‌ಗಳನ್ನು ಸರಬರಾಜು, ತಯಾರಿಕೆ ಮತ್ತು ವಿತರಣೆಯನ್ನು ಮಾಡುವುದಕ್ಕಾಗಿ ಅಗತ್ಯವಿರುವ ಸರ್ವರ್ ಕೊಠಡಿ, ವಿದ್ಯುತ್ ಪರಿಕರಗಳ ಜೋಡಣೆ, ಜನರೇಟರ್, ಪೀಠೋಪಕರಣ ಇತ್ಯಾದಿಗಳನ್ನು ಒದಗಿಸಿ, ಅಳವಡಿಸಿ ಮತ್ತು ನಿರ್ವಹಣೆಯನ್ನು ಸಹ ಖಾಸಗಿಯವರು ಮಾಡತಕ್ಕದ್ದು.

(iii) ಖಾಸಗೀ ಸಂಸ್ಥೆಯು ಒಪ್ಪಂದದ ಅವಧಿಯಲ್ಲಿ ಇತರೆ ಸಂಬಂಧಿತ ಕೆಲಸಗಳಾದ ಈಗಾಗಲೇ ಇರುವ ವಾಹನಗಳ ನೋಂದಣಿ ಮತ್ತು ಚಾಲನಾ ಅನುಜ್ಞಾಪತ್ರಗಳ ದಾಖಲೆಗಳ ಬ್ಯಾಕ್‌ಲಾಗ್ ಮಾಹಿತಿಯನ್ನು ನಮೂದು ಮಾಡುವುದು, ಮುಂದುವರಿಯುತ್ತಿರುವ ಎಲ್ಲಾ ಮಾಹಿತಿಯ ಡಾಟಾ ನಮೂದು ಮಾಡುವುದು, ಎಲ್ಲಾ ಕಛೇರಿಗಳಲ್ಲಿ ತಾಂತ್ರಿಕ ಸಲಹೆಗಾರರನ್ನು ನೇಮಿಸುವುದು, ಸಾರಿಗೆ ಇಲಾಖೆಯ ಸಿಬ್ಬಂದಿಗೆ ತರಬೇತಿ ನೀಡುವುದು ಮತ್ತು ಆಗಿಂದಾಗ್ಗೆ ಉಪಯೋಗಿಸುವ ಸಲಕರಣೆಗಳನ್ನು ಸರಬರಾಜು ಮಾಡತಕ್ಕದ್ದು.

ಒಪ್ಪಂದದ ಅವಧಿಯಲ್ಲಿ ರಾಜ್ಯದ ಎಲ್ಲಾ ಸಾರಿಗೆ ಕಛೇರಿಗಳಲ್ಲಿ ಸಂಪೂರ್ಣ ಗಣಕೀಕರಣ ಮತ್ತು ಸ್ಮಾರ್ಟ್ ಕಾರ್ಡ್ ನೀಡುವಿಕೆಯನ್ನು ಮಾಡಲು ಕಂಪ್ಯೂಟರ್‌ಗಳ ನಿರ್ವಹಣೆ, (ಗಣಕೀಕರಣಗೊಂಡಿರುವ 13 ಕಛೇರಿಗಳಲ್ಲಿನ ಕಂಪ್ಯೂಟರ್‌ಗಳ ಬದಲಾವಣೆ ಮತ್ತು ನಿರ್ವಹಣೆ ಸೇರಿದಂತೆ) ಯೋಜನೆಯ ಅಗತ್ಯತೆಗಳು ಮತ್ತಿನ್ನಿತರ ಸೇವೆಗಳನ್ನು ಟೆಂಡರ್‌ನಲ್ಲಿ ನಮೂದಿಸಿರುವಂತೆ ಖಾಸಗೀಯವರು ನೀಡತಕ್ಕದ್ದು.

(iv) ಒಪ್ಪಂದದ ಅವಧಿಯು ಒಪ್ಪಂದ ಸಹಿ ಮಾಡಿದ ದಿನಾಂಕದಿಂದ 15 ವರ್ಷಗಳು ಅಥವಾ ಒಂದು ಕೋಟಿ ಸ್ಮಾರ್ಟ್ ಕಾರ್ಡ್ ಚಾಲನಾ ಅನುಜ್ಞಾಪತ್ರಗಳು ಮತ್ತು ಒಂದು ಕೋಟಿ ನೋಂದಣಿ ಪ್ರಮಾಣ ಪತ್ರಗಳನ್ನು ನೀಡುವಿಕೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇರುತ್ತದೆ. ಒಪ್ಪಂದದಲ್ಲಿ ತಿಳಿಸಿರುವ ಸೇವೆಗಳನ್ನು ನೀಡಲು ವಿಳಂಬ ಮಾಡಿದಲ್ಲಿ ಖಾಸಗಿಯವರು ಒಪ್ಪಂದದಲ್ಲಿ ನಮೂದಿಸಿರುವಂತೆ ದಂಡ ಪಾವತಿಸತಕ್ಕದ್ದು.

(v) ಈ ಯೋಜನೆಯನ್ನು ಸಂಪೂರ್ಣವಾಗಿ ಜಾರಿಗೊಳಿಸುವುದನ್ನು ಮೇಲ್ವಿಚಾರಣೆ ಮಾಡಲು ಸಾರಿಗೆ ಆಯುಕ್ತರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸತಕ್ಕದ್ದು. ಖಾಸಗಿ ಕಂಪನಿಯ ಪ್ರತಿನಿಧಿಗಳು, ನ್ಯಾಷನಲ್ ಇನ್‌ಫರ್ಮಾಟಿಕ್ ಸೆಂಟರ್, ಇ-ಗೌರ್ನನೆನ್ಸ್ ಸಚಿವಾಲಯ, ಯೋಜನೆಯ ಉಸ್ತುವಾರಿ ಘಟಕದ ಮುಖ್ಯಸ್ಥ ಇವರುಗಳು ಅನುಷ್ಠಾನ ಪುನರಾವಲೋಕನ ಸಮಿತಿಯ ಸದಸ್ಯರಾಗಿರುತ್ತಾರೆ. ಇದೇ ರೀತಿಯಲ್ಲಿ ಯೋಜನೆಯ ದಿನನಿತ್ಯ ಅನುಷ್ಠಾನ ಮತ್ತು ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಉಪ ಸಾರಿಗೆ ಆಯುಕ್ತರವರ ನೇತೃತ್ವದಲ್ಲಿ, ನ್ಯಾಷನಲ್ ಇನ್‌ಫರ್ಮ್ಯಾಟಿಕ್ ಸೆಂಟರ್, ಖಾಸಗಿ ಕಂಪನಿಯ ಪ್ರತಿನಿಧಿಗಳು, ತಾಂತ್ರಿಕ ಸಲಹೆಗಾರರು ಮತ್ತು ಪೂರಕ ಸಿಬ್ಬಂದಿಯನ್ನೊಳಗೊಂಡಂತೆ ಯೋಜನಾ ಉಸ್ತುವಾರಿ ಸಮಿತಿಯನ್ನು ಸಹ ರಚಿಸತಕ್ಕದ್ದು.

(vi) ಟೆಂಡರ್‌ನಲ್ಲಿ ನಿಗದಿಗೊಳಿಸುವ ಸ್ಥಾಪನೆ ಘಟ್ಟದಲ್ಲಿ ಒಪ್ಪಂದಕ್ಕೆ ಸಹಿ ಮಾಡಿದ ದಿನಾಂಕದಿಂದ ಆರು ತಿಂಗಳ ಅವಧಿಯಲ್ಲಿ ಕಂಪ್ಯೂಟರ್ ಹಾರ್ಡ್‌ವೇರ್ ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲಾ ಪರಿಕರಗಳನ್ನು ಸ್ಥಾಪಿಸತಕ್ಕದ್ದು. ಅವುಗಳ ಕಾರ್ಯ ಮತ್ತು ನಿರ್ವಹಣೆಯು ಒಪ್ಪಂದದ ಅವಧಿಯವರೆವಿಗೂ ಚಾಲ್ತಿಯಲ್ಲಿರುತ್ತದೆ.

(vii) ಸ್ಮಾರ್ಟ್ ಕಾರ್ಡ್ ಚಾಲನಾ ಅನುಜ್ಞಾ ಪತ್ರ ಹೊಂದಿರುವವರು ಮೊದಲನೆ ವರ್ಷದ ಅವಧಿಯಲ್ಲಿ ರಸ್ತೆ ಅಪಘಾತದಲ್ಲಿ ಸಾವಿಗೀಡಾದಲ್ಲಿ 1.00 ಲಕ್ಷ ರೂ.ಗಳು ಮತ್ತು ಶಾಶ್ವತ ಸಂಪೂರ್ಣ ಅಂಗವಿಕಲತೆಯಾದಲ್ಲಿ 50 ಸಾವಿರ ರೂಗಳ ವಿಮೆ ಮಾಡಿಸುವ ಜವಾಬ್ದಾರಿಯನ್ನು ಸಹ ಈ ಯೋಜನೆಯನ್ನು ಜಾರಿಗೊಳಿಸುವ ಖಾಸಗಿಯವರು ಹೊಂದತಕ್ಕದ್ದು.

(viii) ಸದರಿ ಯೋಜನೆಯನ್ನು ಟೆಂಡರ ದಾಖಲೆಯಲ್ಲಿ ನಮೂದಿಸಿರು ನಿಬಂಧನೆ ಹಾಗೂ ಷರತ್ತುಗಳಿಗೆ ಒಳಪಟ್ಟು ಜಾರಿ/ ಅನುಷ್ಠಾನಗೊಳಿಸತಕ್ಕದ್ದು.

(2)(i) ಸಾರಿಗೆ ಕ್ಷೇಮಾಭಿವೃದ್ಧಿ ಮತ್ತು ರಸ್ತೆ ಸುರಕ್ಷತೆ ü (Transport Welfare & Road Safety) ಸಾರ್ವಜನಿಕರ ಹಿತಕ್ಕಾಗಿ ರಸ್ತೆ ಸುರಕ್ಷತಾ ಚಟುವಟಿಕೆಗಳ / ಕಾರ್ಯಕ್ರಮಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ ದಲ್ಲಿ ಪಟ್ಟಿಮಾಡಿರುವಂತೆ ಕಾರ್ಯ ಕೈಗೊಳ್ಳಲು ಹೊಸ ಯೋಜನೆಯನ್ನು ಹಮ್ಮಿಕೊಳ್ಳುವುದು. ಈ ಕಾರ್ಯಕ್ರಮದ ರೂಪು ರೇಷೆ, ಅನುಷ್ಠಾನ ಮತ್ತು ಮೇಲುಸ್ತುವಾರಿಯನ್ನು ಮಾಡಲು ಈ ಕೆಳಗಿನಂತೆ ರಾಜ್ಯಮಟ್ಟದ ಸಮಿತಿಯನ್ನು ರಚಿಸಲಾಗಿದೆ;

| | | |
|---|---|---|
| 1) ಸರ್ಕಾರದ ಮುಖ್ಯ ಕಾರ್ಯದರ್ಶಿ | - | ಅಧ್ಯಕ್ಷರು. |
| 2) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | - | ಸಹ ಅಧ್ಯಕ್ಷರು. |
| 3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಒಳಾಡಳಿತ ಇಲಾಖೆ | - | ಸದಸ್ಯರು. |
| 4) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಸಾರಿಗೆ ಇಲಾಖೆ | - | ಸದಸ್ಯರು. |
| 5) ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ | - | ಸದಸ್ಯಕಾರ್ಯದರ್ಶಿ. |

**(iii)** ಸಾರಿಗೆ ಕ್ಷೇಮಾಭಿವೃದ್ಧಿ ಮತ್ತು ರಸ್ತೆ ಸುರಕ್ಷತೆ ಕಾರ್ಯಕ್ರಮಕ್ಕೆ, ಸಾರಿಗೆ ಇಲಾಖೆಯು ಸಂಗ್ರಹಿಸಿ ರಾಜ್ಯದ ಕ್ರೋಢೀಕೃತ ನಿಧಿಗೆ ಜಮಾ ಮಾಡಿರುವ ಶುಲ್ಕದ ಉಳಿಕೆ ಮೊತ್ತವನ್ನು ಆಯ-ವ್ಯಯ ಪಟ್ಟಿಯಲ್ಲಿ ಮಂಜೂರಾತಿ ಪಡೆದು ಕಾರ್ಯಕ್ರಮವನ್ನು ಅನುಷ್ಠಾನಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಅದರ ಅ.ಟಿ. ಸಂ. ಎಫ್‌ಡಿ 398 ವೆಚ್ಚ-6/2008 ದಿನಾಂಕ : 8-9-2008 ರಲ್ಲಿ ಮತ್ತು ದಿನಾಂಕ 23-9-2008 ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಪೇಂದ್ರ ತ್ರಿಪಾಠಿ**
ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ

**ಸಾರಿಗೆ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ ಸಾರಿಇ 142 ಸಾಇಪ 2007 ದಿನಾಂಕ: 10-12-2008 ರ**

**ಅನುಬಂಧ**

**ಸಾರಿಗೆ ಕ್ಷೇಮಾಭಿವೃದ್ಧಿ ಮತ್ತು ರಸ್ತೆ ಸುರಕ್ಷತೆ ಯೋಜನೆ ಅಡಿಯಲ್ಲಿ ಕಾರ್ಯಕ್ರಮಗಳು**.

1. ಸಾರಿಗೆ ವಾಹನ ಚಾಲಕರ ಯೋಗಕ್ಷೇಮದ ಬಗ್ಗೆ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳುವುದು.
2. ಪರ್ಯಾಯ ತಂತ್ರಜ್ಞಾನ ಅಭಿವೃದ್ಧಿ ಪಡಿಸುವುದು.
3. ವಾಹನಗಳಲ್ಲಿ GPS/GPRS ಗಳ ಬಳಕೆಯನ್ನು ಜನಪ್ರಿತಿಯಗೊಳಿಸುವ ನವೀನತೆಯ ಮನೋಭಾವವನ್ನು ವೃದ್ಧಿಗೊಳಿಸುವುದು.
4. ಅಸಂಘಟಿತ ವಲಯದ ಟ್ರಾಕ್ಟರ್ - ಟ್ರೈಲರ್ ನಿರ್ಮಾಣ ಸಾಮಗ್ರಿ ಚಾಲಕರಿಗೆ ಅರಿವು ಮೂಡಿಸಲು ಶಿಬಿರಗಳನ್ನು ಏರ್ಪಡಿಸುವುದು.
5. ಮಾನವ ಸಂಪನ್ಮೂಲ ಅಭಿವೃದ್ಧಿ ಕಾರ್ಯಕ್ರಮಗಳು.
6. ಆಯ್ದ NGO ಸಂಘಟನೆಗಳಿಗೆ ರಸ್ತೆ ಸುರಕ್ಷತೆಗೆ ಕಾರ್ಯಕ್ರಮಗಳು.
7. ಇಲಾಖೆಯ ಆಧುನೀಕರಣ.
8. ಮಧ್ಯಪಾನ ಮಾಡಿ ಚಾಲನೆ ಮಾಡುವ ಚಾಲಕರನ್ನು ಪತ್ತೆ ಹಚ್ಚಲು ಬ್ರೆತ್ ಅನಲೈಸರ್‌ಗಳನ್ನು ಖರೀದಿಸುವುದು.
9. ಅತಿವೇಗವಾಗಿ ಚಲಿಸುವ ವಾಹನಗಳ ವೇಗವನ್ನು ತಿಳಿಯಲು ಸಲಕರಣೆಗಳನ್ನು ಖರೀದಿಸುವುದು.
10. ರಸ್ತೆ ಸುರಕ್ಷತೆಯ ದೃಷ್ಟಿಯಿಂದ ಚಾಲನಾ ಅನುಜ್ಞಾ ಪತ್ರ ಪಡೆಯಲು ಬರುವ ಅರ್ಜಿದಾರರ ನಿಪುಣತೆಯನ್ನು ಪರೀಕ್ಷಿಸಲು ಸಾರಿಗೆ ಕಛೇರಿಗಳಲ್ಲಿ "ಡ್ರೈವಿಂಗ್ ಟ್ರ್ಯಾಕ್ " ನಿರ್ಮಿಸುವುದು.

